**14. Eligibility conditions for applicants:**

The bidding documents will specify the eligibility condition.

**15. Implementation of MNRE Schemes:**

The State will continue to implement JNNSM and all other schemes of the MNRE.

**16. Power to remove difficulties:**

If any difficulty arises in giving effect to this policy, the Committee at Clause-6, above, is authorized to issue clarifications as well as interpretations to such provisions, as may appear to be necessary for removing the difficulty either on its own motion or after hearing those parties who have represented for change in any provisions.

Notwithstanding anything contained in these resolutions, the provisions of the Electricity Act 2003 and the applicable regulations issued by CERC/KERC from time to time shall prevail for the purpose of implementations of this policy.

BY ORDER AND IN THE NAME OF GOVERNOR OF KARNATAKA,

**SURESH.B.KRISHNAPPANAVAR**

UNDER SECRETARY TO GOVERNMENT,

ENERGY DEPARTMENT.

**ಇಂಧನ ಇಲಾಖೆ**

**ಅಧಿಸೂಚನೆ**

**ಇಎನ್ 61 ಇನ್‌ಸಿಇ 2011, ಬೆಂಗಳೂರು, ದಿನಾಂಕ: 01–07–2011**

ರಾಜ್ಯದಲ್ಲಿ ಸೌರವಿದ್ಯುತ್ ಉತ್ಪಾದನೆಯನ್ನು ಅಭಿವೃದ್ಧಿಗೊಳಿಸಲು ಹಾಗೂ ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗ ಹೊರಡಿಸಿರುವ ಅಧಿಸೂಚನೆ ಸಂಖ್ಯೆ: S/03/1 ದಿನಾಂಕ: 16–03–2011 ರಂತೆ, ಒಟ್ಟು ವಿದ್ಯುತ್ ಖರೀದಿಯಲ್ಲಿ ಕನಿಷ್ಠ ಮಟ್ಟದ ಸೌರವಿದ್ಯುತ್ ಖರೀದಿಸಲು ವಿತರಣಾ ಕಂಪನಿಗಳಿಗೆ ಅನುವು ಮಾಡಿಕೊಡಲು, ಸರ್ಕಾರವು ಕರಡು ಸೌರ ವಿದ್ಯುತ್ ನೀತಿ 2011–16ಯನ್ನು, ಸರ್ಕಾರಿ ಅಧಿಸೂಚನೆ ಸಂಖ್ಯೆ: ಇಎನ್ 61 ಇನ್‌ಸಿಇ 2011, ದಿನಾಂಕ 02–05–2011ರಲ್ಲಿ ಪ್ರಕಟಿಸಲಾಗಿತ್ತು.

ಕರಡು ಸೌರ ವಿದ್ಯುತ್ ನೀತಿಯನ್ನು ಇಂಧನ ಇಲಾಖೆಯ ಹಾಗೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವೆಬ್‌ಸೈಟ್‌ನಲ್ಲಿ, ಸಂಬಂಧಪಟ್ಟವರಿಂದ ಯಾವುದಾದರು ಸೂಚನೆಗಳು/ಟೀಕೆಗಳು/ಅಭಿಪ್ರಾಯಗಳನ್ನು ಕಳುಹಿಸಲು ಅನುವಾಗುವಂತೆ ಪ್ರಕಟಿಸಲಾಗಿತ್ತು.

ಈ ಅಧಿಸೂಚನೆಯನ್ನು ಕರ್ನಾಟಕ ರಾಜ್ಯ ಪತ್ರ ಸಂಖ್ಯೆ: KA/BG-GPO/2515/WPP-47/2009-2011 ದಿನಾಂಕ 19–05–2011 ರಲ್ಲಿ ಪ್ರಕಟಿಸಲಾಗಿರುತ್ತದೆ ಹಾಗೂ ಸಾರ್ವಜನಿಕರಿಗೆ ದೊರಕುವಂತೆ ಮಾಡಲಾಗಿದೆ.

ರಾಜ್ಯ ಸರ್ಕಾರವು ಅನೇಕ ಸಂಸ್ಥೆಗಳಿಂದ, ವ್ಯಕ್ತಿಗಳಿಂದ ಹಾಗೂ ಸಾರ್ವಜನಿಕರಿಂದ ಸ್ವೀಕೃತಿಯಾದ ಸೂಚನೆಗಳು/ಟೀಕೆಗಳು/ ಅಭಿಪ್ರಾಯಗಳನ್ನು ಪರಿಶೀಲಿಸಿ, ಪರಿಗಣಿಸಿದೆ.

ಆದ್ದರಿಂದ ಈಗ ಕರ್ನಾಟಕ ಸರ್ಕಾರವು ಈ ಕೆಳಕಂಡ ನೀತಿಯಾದ, ಕರ್ನಾಟಕ ಸೌರವಿದ್ಯುತ್ ನೀತಿ 2011–16 ನ್ನು ಪ್ರಕಟಿಸುತ್ತಿದೆ.

**ಸೌರ ವಿದ್ಯುತ್ ನೀತಿ 2011–16**

**1.** ಕರ್ನಾಟಕದಲ್ಲಿ ಸೌರ ವಿದ್ಯುತ್ತನ್ನು ಅಭಿವೃದ್ಧಿ ಪಡಿಸಲು ಹೇರಳವಾದ ಲಭ್ಯತೆ ಇರುತ್ತದೆ. ಕರ್ನಾಟಕ ನವೀಕರಿಸಬಹುದಾದ ಇಂಧನ ನೀತಿಯಲ್ಲಿ 2013–14ರ ಅವಧಿಯ ವೇಳೆಗೆ 126 ಮೆ.ವ್ಯಾ ಸಾಮರ್ಥ್ಯದ ಸೌರಶಕ್ತಿ ಘಟಕವನ್ನು ಸ್ಥಾಪಿಸುವ ಗುರಿ ಹೊಂದಲಾಗಿದೆ. ಜವಾಹರಲಾಲ್ ನೆಹರು ನ್ಯಾಷನಲ್ ಸೋಲಾರ್ ಮಿಷನ್ (ಜೆ.ಎನ್.ಎನ್.ಎಸ್.ಎಂ) ಅಡಿಯಲ್ಲಿ ಪಡೆಯಬಹುದಾದ ಸಾಮರ್ಥ್ಯವು ಇದರಲ್ಲಿ ಸೇರಿರುತ್ತದೆ. ಈ ನಡುವೆ ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗ ಒಟ್ಟು ವಿದ್ಯುತ್ ಬಳಕೆಯಲ್ಲಿ ಶೇಕಡ 0.25ರಷ್ಟು ಸೌರಶಕ್ತಿ ಮೂಲದಿಂದ ಪಡೆಯಬೇಕೆಂದು ನಿಬಂಧನೆ ಹೊರಡಿಸಿದೆ. ಕೇಂದ್ರ ಸರ್ಕಾರವೂ ಸಹ ಒಟ್ಟು ಬಳಕೆಯ ಶೇಕಡ 0.25ರಷ್ಟು ವಿದ್ಯುತ್ತನ್ನು ಸೌರಶಕ್ತಿ ಮೂಲದಿಂದ ಪಡೆಯಬೇಕೆಂದು ತೀರ್ಮಾನಿಸಿದೆ. ಇದು 2022ರ ವೇಳೆಗೆ ಶೇಕಡ 3ರಷ್ಟು ಹೆಚ್ಚಳ ಆಗಬೇಕಾಗಿದೆ. ಆದ್ದರಿಂದ ಒಂದು ಪ್ರತ್ಯೇಕ ಸೌರ ವಿದ್ಯುತ್ ನೀತಿಯನ್ನು 2011–12 ರಿಂದ 2015–16ರ ಅವಧಿಗೆ ಹೊಂದುವುದು ಅವಶ್ಯಕವೆಂದು ಕಂಡುಬಂದಿದೆ.

ಕರ್ನಾಟಕ ನವೀಕರಿಸಬಹುದಾದ ಇಂಧನ ನೀತಿಯಡಿಯಲ್ಲಿ ಸೌರ ವಿದ್ಯುತ್‌ನ್ನು ಉತ್ತೇಜಿಸುವುದು ಇದರ ಮುಖ್ಯ ಉದ್ದೇಶವಾಗಿರುತ್ತದೆ.

**2. ಕಾರ್ಯಾಚರಣೆಯ ಅವಧಿ:**

ನೀತಿಯು 01–07–2011ರಿಂದ ಜಾರಿಗೆ ಬರುತ್ತದೆ ಹಾಗೂ ಸರ್ಕಾರವು ಅಥವಾ ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗ ಯಾವುದಾದರೂ ಬದಲಾವಣೆ ಮಾಡುವತನಕ ಅಥವಾ 31–3–2016ರವರೆಗೆ ಯಾವುದು ಮೊದಲೋ ಅಲ್ಲಿಯವರೆಗೆ ಜಾರಿಯಲ್ಲಿರುತ್ತದೆ.

**3. ಪರಿಭಾಷಣೆ:**

1. ಕೆ.ಇ.ಆರ್.ಸಿ: ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗ.
2. ಜೆ.ಎನ್.ಎನ್.ಎಸ್.ಎಂ: ಜವಾಹರ್‌ಲಾಲ್ ನೆಹರು ನ್ಯಾಷನಲ್ ಸೋಲಾರ್ ಮಿಷನ್.

3. ವಿ.ವಿ.ಕಂ: ವಿದ್ಯುತ್ ವಿತರಣಾ ಕಂಪನಿಗಳು.
4. ಮೆ.ವ್ಯಾ: ಮೆಗಾ ವ್ಯಾಟ್ಸ ಶಕ್ತಿ.
5. ಕ್ರೆಡಲ್: ಕರ್ನಾಟಕ ನವೀಕರಿಸಬಹದಾದ ಇಂಧನ ಅಭಿವೃದ್ಧಿ ನಿಗಮ ನಿಯಮಿತ.
6. ಕ.ವಿ.ಪ್ರ.ನಿ.ನಿ: ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ.
7. ಆರ್.ಇ.ಸಿ: ರಿನ್ಯೂವಬಲ್ ಎನರ್ಜಿ ಸರ್ಟಿಫಿಕೇಟ್.
8. ಸಿ.ಇ.ಆರ್.ಸಿ: ಕೇಂದ್ರ ವಿದ್ಯುತ್ ನಿಯಂತ್ರಣ ಆಯೋಗ.
9. ಎನ್.ಎಲ್.ಡಿ.ಸಿ: ನ್ಯಾಷನಲ್ ಲೋಡ್ ಡಿಸ್‌ಪ್ಯಾಚ್ ಸೆಂಟರ್.
10. ಪಿ.ಪಿ.ಎ: ವಿದ್ಯುತ್ ಖರೀದಿ ಒಪ್ಪಂದ.
11. ಕೆ.ಪಿ.ಸಿ.ಎಲ್: ಕರ್ನಾಟಕ ಪವರ್ ಕಾರ್ಪೋರೇಷನ್ ಲಿಮಿಟೆಡ್.
12. ಸಿ.ಡಿ.ಎಂ: ಕ್ಲೀನ್ ಡೆವಲೆಪ್‌ಮೆಂಟ್ ಮೆಕ್ಯಾನಿಸಂ.
13. ಸಿ.ಇ.ಎ: ಕೇಂದ್ರ ವಿದ್ಯುತ್ ಪ್ರಾಧಿಕಾರ.
14. ಎಂ.ಎನ್.ಆರ್.ಇ: ಹೊಸ ಹಾಗೂ ನವೀಕರಿಸಬಹುದಾದ ಇಂಧನ ಸಚಿವಾಲಯ, ಕೇಂದ್ರ ಸರ್ಕಾರ

**4. . ವಿದ್ಯುತ್ ವಿತರಣಾ ಕಂಪನಿಗಳು ಖರೀದಿ ಮಾಡಲು ಸ್ಥಾಪಿಸಬೇಕಾದ ಸಾಮರ್ಥ್ಯ:**

ವಿದ್ಯುತ್ ವಿತರಣಾ ಕಂಪನಿಗಳು ಖರೀದಿ ಮಾಡಲು 2015–16ರ ಅವಧಿಗೆ 200ಮೆ.ವ್ಯಾ ಸಾಮರ್ಥ್ಯವನ್ನು ಸ್ಥಾಪಿಸಲು ಉದ್ದೇಶಿಸಿದೆ. ಜೆ.ಎನ್.ಎನ್.ಎಸ್.ಎಂ ಸ್ಕೀಮ್‌ನಿಂದ ಹಂಚಿಕೆ ಆಗುವುದಕ್ಕೆ ಇದು ಹೆಚ್ಚುವರಿ ಆಗಿರುತ್ತದೆ. ಪ್ರತಿ ವರ್ಷ ಸ್ಥಾಪಿತವಾಗಬೇಕಾದ ಅನುಮೋದಿತ ಸಾಮಾರ್ಥ್ಯ ಈ ರೀತಿಯದಾಗಿರುತ್ತದೆ.

| 2011–12 | 2012–13 | 2013–14 | 2014–15 | 2015–16 |
|---|---|---|---|---|
| 40ಮೆ.ವ್ಯಾ | 40ಮೆ.ವ್ಯಾ | 40ಮೆ.ವ್ಯಾ | 40ಮೆ.ವ್ಯಾ | 40ಮೆ.ವ್ಯಾ |

ಸೋಲಾರ್ ಪೋಟೋ ವೋಲ್ಟಾಯಿಕ್ ಯೋಜನೆಯಲ್ಲಿ ಪ್ರತಿ ಸೌರಶಕ್ತಿ ಘಟಕದ ಸಾಮರ್ಥ್ಯ ಕನಿಷ್ಠ 3 ಮೆ.ವ್ಯಾ ಹಾಗೂ ಗರಿಷ್ಠ 10 ಮೆ.ವ್ಯಾ ಆಗಿರುತ್ತದೆ. ಸೋಲಾರ್ ಶಾಖೋತ್ವನ್ನ ಯೋಜನೆಯಲ್ಲಿ ಪ್ರತಿ ಸೌರ ಶಕ್ತಿ ಘಟಕದ ಸಾಮರ್ಥ್ಯ ಕನಿಷ್ಠ 5 ಮೆ.ವ್ಯಾ ಆಗಿರುತ್ತದೆ.

11 ಕೆ.ವಿ ಹಾಗೂ ಹೆಚ್ಚಿನ ಒತ್ತಡದ ವಿದ್ಯುತ್ ಜಾಲವನ್ನು ಈ ಯೋಜನೆಗಳಿಂದ ವಿದ್ಯುತ್ ಸಾಗಣೆ ಮಾಡಲು ಹೊಂದಬೇಕಾಗಿರುತ್ತದೆ.

**5. ಕಲಂ 4ರ ಅಡಿ ಸಾಮರ್ಥ್ಯದ ಹಂಚಿಕೆ ಬಗ್ಗೆ:**

ವಿ.ವಿ.ಕಂ ಗಳ ಜೊತೆ ವಿದ್ಯುತ್ ಖರೀದಿ ಮಾಡಲು ಹಾಗೂ ಯೋಜನೆಗಳ ಸಾಮರ್ಥ್ಯದ ಹಂಚಿಕೆ/ಸ್ಥಾಪನೆಗೆ ಸ್ಪರ್ಧಾತ್ಮಕ ಸವಾಲು ಪ್ರಕ್ರಿಯೆ ಮೂಲಕ ಮಾಡಲಾಗುವುದು. ಸ್ಪರ್ಧಾತ್ಮಕ ಸವಾಲು ಪ್ರಕ್ರಿಯೆಯೂ ಕೆ.ಇ.ಆರ್.ಸಿ ಯವರು ನಿಗದಿ ಪಡಿಸಿರುವ ಗರಿಷ್ಠ ವಿದ್ಯುತ್(ಟ್ಯಾರಿಫ್) ದರದ ಅನುಗುಣವಾಗಿರುತ್ತದೆ.

**6. ಮೇಲ್ವಿಚಾರಣೆ ಸಮಿತಿ:**

ಈ ಯೋಜನೆಯ ಅನುಷ್ಠಾನವನ್ನು ಗಮನಿಸಲು ಒಂದು ಉಸ್ತುವಾರಿ ಸಮಿತಿ ಇರುತ್ತದೆ ಈ ಸಮಿತಿಯು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ/ಕಾರ್ಯದರ್ಶಿ, ಇಂಧನ ಇಲಾಖೆ, ರವರ ಅಧ್ಯಕ್ಷತೆಯಲ್ಲಿ ಈ ಕೆಳಕಂಡ ಸದಸ್ಯರನ್ನೊಳಗೊಂಡು ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ ಕಂದಾಯ ಇಲಾಖೆ; ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ; ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ, ಅರಣ್ಯ, ಜೈವಿಕ ಹಾಗೂ ಪರಿಸರ ಇಲಾಖೆ; ವ್ಯವಸ್ಥಾಪಕ ನಿರ್ದೇಶಕರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಗಮ ನಿಯಮಿತ; ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಇಲಾಖೆ ಕರ್ನಾಟಕ ಸರ್ಕಾರ; ವ್ಯವಸ್ಥಾಪಕ ನಿರ್ದೇಶಕರು ಕರ್ನಾಟಕ ವಿದ್ಯುತ್ ನಿಗಮ ನಿಯಮಿತ; ವ್ಯವಸ್ಥಾಪಕ ನಿರ್ದೇಶಕರು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತರವರುಗಳು ಸದಸ್ಯರುಗಳಾಗಿ ಹಾಗೂ ಸರ್ಕಾರದ ಉಪಕಾರ್ಯದರ್ಶಿ, ಇಂಧನ ಇಲಾಖೆರವರು ಸದಸ್ಯ ಸಮಾವೇಶಕರು ಆಗಿರುತ್ತಾರೆ.

**7. ಕ್ಯಾಪ್ಟಿವ್ ಸೌರ ವಿದ್ಯುತ್ ಘಟಕ ಹಾಗೂ ಮೂರನೆಯವರಿಗೆ ಮಾರಾಟ ಮಾಡಲು:**

ವಿದ್ಯುತ್ತನ್ನು ಸ್ವಂತ ಬಳಕೆಗೆ ಉಪಯೋಗಿಸಲು ಹಾಗೂ ಮೂರನೆಯವರಿಗೆ ಮಾರಾಟ ಮಾಡಲು(ವಿದ್ಯುತ್ ವಿತರಣಾ ಕಂಪನಿಗಳನ್ನು ಬಿಟ್ಟು) ಸ್ಥಾಪಿಸುವ ಘಟಕಗಳು ಈ ನೀತಿಯ ಗುರಿಯಾದ 200ಮೆ.ವ್ಯಾ ಸಾಮರ್ಥ್ಯದಲ್ಲಿ ಸೇರಿರುವುದಿಲ್ಲ. ಅಂತಹ ಸಂದರ್ಭಗಳಲ್ಲಿ ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗವು/ಕೇಂದ್ರ ವಿದ್ಯುತ್ ನಿಯಂತ್ರಣ ಆಯೋಗವು ನಿಗದಿ ಪಡಿಸಿರುವ ದರದಲ್ಲಿ ವೀಲಿಂಗ್ ಶುಲ್ಕವನ್ನು ತೆರಬೇಕಾಗುತ್ತದೆ. ಮುಕ್ತ ಪ್ರವೇಶಾವಕಾಶ (Open Access) ಯಾವುದಾದರೂ ಅಭಿವೃದ್ಧಿದಾರರಿಗೆ ನೀಡಿದಲ್ಲಿ, ಮುಕ್ತ ಪ್ರವೇಶಾವಕಾಶದ ಶುಲ್ಕವನ್ನು ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗವು/ಕೇಂದ್ರ ವಿದ್ಯುತ್ ನಿಯಂತ್ರಣ ಆಯೋಗವು ನಿಗದಿ ಪಡಿಸಿರುವ ದರದಲ್ಲಿ ತೆರಬೇಕಾಗುತ್ತದೆ.

**8. ಆರ್.ಇ.ಸಿ. ಯಂತ್ರ ಸಂಯೋಜನೆ (Renewable Energy Certificate Mechanism) ಯಲ್ಲಿ ಸ್ಥಾಪಿತವಾದ ಯೋಜನೆಗಳು:**

ಈ ಯಂತ್ರ ಸಂಯೋಜನೆಯಲ್ಲಿ (Mechanism) ಸೌರ ವಿದ್ಯುತ್ ಉತ್ಪಾದಕರು, ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗದವರು, ಆರ್.ಇ.ಸಿ. ಯಂತ್ರ ಸಂಯೋಜನೆಯಡಿಯಲ್ಲಿ ವಿದ್ಯುತ್ ಖರೀದಿ ಒಟ್ಟು ಗೂಡಿಸಿ ನಿಗಧಿ ಪಡಿಸಿದ ದರದಂತೆ ವಿದ್ಯುತ್ತನ್ನು ವಿದ್ಯುತ್ ವಿತರಣಾ ಕಂಪನಿಗಳಿಗೆ ಮಾರಾಟ ಮಾಡಬಹುದು, ಹಾಗೂ ಆರ್.ಇ.ಸಿ.ಯನ್ನು ಆಭಾರ ಅಸ್ತಿತ್ವಗಳಿಗೆ (Obligated Entities) ಮಾರಾಟ ಮಾಡಬಹುದು.

ಸಂಬಂಧಪಟ್ಟ ನಿಯೋಗವು ನೀಡಿರುವ ನಿಯಮದಡಿಯಲ್ಲಿ, ಅಭಿವೃದ್ಧಿದಾರರು ಆರ್.ಇ.ಸಿ ದೃಢೀಕರಣ ಪತ್ರ ಪಡೆಯಲು ಹಾಗೂ ಮಾರಾಟಮಾಡಲು, ಮೊದಲು ಎಸ್.ಎಲ್.ಡಿ.ಸಿ.ಗೆ ಅರ್ಜಿಯನ್ನು ದೃಢೀಕರಿಸಲು ಸಲ್ಲಿಸಬೇಕು. ಎಸ್.ಎಲ್.ಡಿ.ಸಿ ರಾಜ್ಯದ ಕಾರ್ಯಭಾರಿ (Nodal Agency) ಎಂದು ಕೆ.ಇ.ಆರ್.ಸಿ ಸೂಚಿಸಿದೆ. ನಂತರ ಸಿ.ಇ.ಆರ್.ಸಿ ನೇಮಿಸಿರುವ ಕೇಂದ್ರ ಕಾರ್ಯಭಾರಿ ಎನ್.ಎಲ್.ಡಿ.ಸಿ ಯಲ್ಲಿ ನೊಂದಾಯಿಸಿಕೊಳ್ಳಬೇಕು. ಈ ಸ್ಕೀಮ್‌ನಡಿಯಲ್ಲಿ ರಾಜ್ಯದಲ್ಲಿ 100 ಮೆ.ವ್ಯಾ ಸಾಮಾರ್ಥ್ಯದ ಸ್ಥಾವರವನ್ನು ಸ್ಥಾಪಿಸಬಹುದಾಗಿರುತ್ತದೆ.

**9. ಸಂಯೋಜಿತ ವಿದ್ಯುತ್ ಬಗ್ಗೆ:**

ಸೌರ ವಿದ್ಯುತ್ತನ್ನು ಹೊರ ರಾಜ್ಯದ ಶಾಖೋತ್ಪನ್ನ ವಿದ್ಯುತ್ ನೊಂದಿಗೆ ಸಂಯೋಜಿಸಿ, ಕೆ.ಇ.ಆರ್.ಸಿಯಿಂದ ಅನುಮೋದನೆಗೊಳಪಟ್ಟು, ಸರ್ಕಾರವು ನಿಗದಿ ಪಡಿಸಿದ ದರದಂತೆ ವಿದ್ಯುತ್ ನೀಡುವ ಸಲುವಾಗಿ, ಕೇಂದ್ರ ಅಥವಾ ಕರ್ನಾಟಕ ರಾಜ್ಯದ ಸ್ವಾಮ್ಯಕ್ಕೊಳಪಟ್ಟ ಸಂಸ್ಥೆಗಳಿಂದ ಸ್ಥಾಪಿಸಲ್ಪಡುವ, 50 ಮೆ.ವ್ಯಾ ಯೋಜನೆ ಸಾಮರ್ಥ್ಯವನ್ನು, ಸೌರ ವಿದ್ಯುತ್ ಘಟಕಗಳಿಗೆ ಹಂಚಿಕೆ ನೀಡುವ ಹಕ್ಕನ್ನು ಸರ್ಕಾರವು ಮೀಸಲಿರಿಸಿಕೊಂಡಿರುತ್ತದೆ. ಗರಿಷ್ಠ 50 ಮೆ.ವ್ಯಾ ಸೌರ ಶಕ್ತಿಯನ್ನು ಈ ಕಲಮಿನಡಿ ಅನುಮೋದನೆ ನೀಡಲಾಗುತ್ತದೆ. ಕಲಂ 4ರಲ್ಲಿ ಸೂಚಿಸಿರುವ ಒಟ್ಟು ಸಾಮರ್ಥ್ಯದ 200 ಮೆ.ವ್ಯಾನ್ನೂ ಬಿಟ್ಟು ಇದು ಸೇರಿರುತ್ತದೆ.

**10. ಖರೀದಿಯ ಅನಿವಾರ್ಯತೆ:**

ಸೌರ ವಿದ್ಯುತ್ ಮೂಲಗಳಿಂದ, ವಿದ್ಯುತ್ ವಿತರಣಾ ಕಂಪನಿಗಳು ಖರೀದಿಸಬೇಕಾಗಿರುವ ವಿದ್ಯುತ್ ಮೊತ್ತವು ಒಟ್ಟು ಬಳಕೆಯ ಶೇಕಡ 0.25ರಷ್ಟು ಆಗಿರುತ್ತದೆ. ಈ ನಿಗಧಿತ ಮೊತ್ತಕ್ಕಿಂತ ಖರೀದಿಯು ಕಡಿಮೆಯಾದಲ್ಲಿ, ವಿದ್ಯುತ್ ವಿತರಣಾ ಕಂಪನಿಗಳು "Solar specific Renewable Energy Certificate" ಗಳನ್ನು ಖರೀದಿ ಮಾಡುವ ಮೂಲಕ ಸರಿದೂಗಿಸಬಹುದಾಗಿದೆ.

**11. ಸಿ.ಡಿ.ಎಮ್ ಲಾಭವನ್ನು ಹಂಚಿಕೊಳ್ಳುವ ಬಗ್ಗೆ:**

ಕಲಂ 4ರ ಯೋಜನೆಗಳಿಗೆ ಸಂಬಂಧಿಸಿದಂತೆ ಸಿ.ಡಿ.ಎಮ್ ಲಾಭವನ್ನು ಹಂಚಿಕೊಳ್ಳುವ ಬಗ್ಗೆ ಸವಾಲು ಮಾಡುವ ದಾಖಲೆಗಳಲ್ಲಿ (bidding documents), ಗೊತ್ತುಮಾಡಲಾಗುವುದು.

**12. ನೇಮಿತ ಪ್ರತಿನಿಧಿ:**

ಈ ನೀತಿಯನ್ನು ಅನುಕೂಲಗೊಳಿಸಲು ಹಾಗೂ ಕಾರ್ಯರೂಪಕ್ಕೆ ತರಲು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ನೇಮಿತ ಪ್ರತಿನಿಧಿ ಆಗಿರುತ್ತದೆ. ಯೋಜನೆಗಳಿಗೆ ಬೇಕಾದ ಸವಾಲು ಮಾಡುವ ದಾಖಲೆಗಳಾದ (bidding documents), ಎಕ್ಸ್‌ಪ್ರೆಶನ್ ಆಫ್ ಇಂಟರೆಷ್ಟು, ಏಜೆನ್ಸಿಗಳ ಮಾನದಂಡದ ಮೇಲೆ ದಾಖಲೆ ಪಟ್ಟಿ ಮಾಡುವುದು, ಕೋರಿಕೆ ಮೇಲೆ ಪ್ರಸ್ತಾವನೆ ಮಾಡುವುದು, ವಿವರವಾದ ತಾಂತ್ರಿಕ ಹಾಗೂ ಆರ್ಥಿಕ ಅಂಶಗಳ ಪ್ರಸ್ತಾವನೆ ಮಾಡುವುದು, ಗುತ್ತಿಗೆಯ ಸಾಮಾನ್ಯ ಒಪ್ಪಂದದ ಶರತ್ತುಗಳು ಮತ್ತು ವಿಶೇಷ ಒಪ್ಪಂದದ ಶರತ್ತುಗಳನ್ನು ಮಾಡುವುದು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಾಗಿರುತ್ತದೆ.

**13 . ಮಾಪನ ಹಾಗೂ ಇವ್ಯಾಕ್ಯೂಏಷನ್:**

ಮಾಪನ ಹಾಗೂ ಇವ್ಯಾಕ್ಯೂಏಷನ್ನು, ಸಿ.ಇ.ಎ. (Installation and Operation of meters) ರೆಗ್ಯೂಲೇಷನ್ 2006ರ ನಿಬಂಧನೆಗೆ ಹಾಗೂ ಕೆ.ಇ.ಆರ್.ಸಿ/ಸಿ.ಇ.ಆರ್.ಸಿರವರು ಕಾಲಕಾಲಕ್ಕೆ ಸೂಚಿಸುವ ನಿಬಂಧನೆಗೆ ಒಳಪಟ್ಟಿರುತ್ತದೆ.

14. **ಅರ್ಜಿದಾರರ ಅರ್ಹತ ನಿಬಂಧನೆಗಳು:**

ಸವಾಲು ಮಾಡುವ ದಾಖಲೆಗಳಲ್ಲಿ ಅರ್ಜಿದಾರರ ಅರ್ಹತಾ ನಿಬಂಧನೆಗಳನ್ನು ನಿರ್ಧಿಷ್ಟ ಪಡಿಸಲಾಗುವುದು.

**15. ಎಮ್.ಎನ್.ಆರ್.ಇ. ಯೋಜನೆಯನ್ನು ಅನುಷ್ಠಾನ ಗೊಳಿಸುವ ಬಗ್ಗೆ:**

ರಾಜ್ಯವು ಜೆ.ಎನ್.ಎನ್.ಎಸ್.ಎಮ್ ಹಾಗೂ ಎಮ್.ಎನ್.ಆರ್.ಇ ರವರು ಹೊರಡಿಸುವ ಇತರೆ ಯಾವುದೇ ಯೋಜನೆಗಳನ್ನು ಅನುಷ್ಠಾನಗೊಳಿಸುವ ಕಾರ್ಯವನ್ನು ಮುಂದುವರಿಸುತ್ತದೆ.

**16. ತೊಂದರೆ ನಿವಾರಣೆ ಮಾಡುವ ಹಕ್ಕು:**

ಈ ನೀತಿಯನ್ನು ಅನುಷ್ಠಾನಗೊಳಿಸುವ ಸಂದರ್ಭದಲ್ಲಿ ಆಗುವ ತೊಂದರೆಗಳನ್ನು ನಿವಾರಣೆ ಗೊಳಿಸುವಲ್ಲಿ ಹಾಗೂ ಈ ನೀತಿಯಲ್ಲಿ ಯಾವುದೇ ವಿಷಯವನ್ನು ಅರ್ಥೈಸುವಲ್ಲಿ, ಅಥವಾ ನೀತಿಯಲ್ಲಿನ ಯಾವುದೇ ಬದಲಾವಣೆಯನ್ನು ಸಮಿತಿಯು ತಾನೇ ತರುವ ಸಂದರ್ಭದಲ್ಲಿ ಅಥವಾ ಇದರ ಬದಲಾವಣೆಗೆ ಅರ್ಜಿದಾರರು ಸಲ್ಲಿಸಿದ ಅಹವಾಲನ್ನು ಆಲಿಸಿದ ನಂತರ ಬದಲಾವಣೆ ತರುವ ಅಧಿಕಾರವನ್ನು ಕಲಂ 6 ರಲ್ಲಿ ಸೂಚಿಸಿರುವ ಸಮಿತಿಯು ಹೊಂದಿರುತ್ತದೆ.

ಈ ಠರಾವಿನಲ್ಲಿ (Resolution) ಏನೇ ಒಳಗೊಂಡಿದ್ದರೂ ಸಹ, ವಿದ್ಯುಚ್ಛಕ್ತಿ ಅಧಿನಿಯಮ 2003ರ ಅವಕಾಶಗಳು ಹಾಗೂ ಸಿ.ಇ.ಆರ್.ಸಿ/ಕೆ.ಇ.ಆರ್.ಸಿ ರವರು ಕಾಲಕಾಲಕ್ಕೆ ಹೊರಡಿಸುವ ವಿನಿಯಮಗಳು, ಅಧ್ಯಾರೋಹಿ ಪ್ರಭಾವವನ್ನು (Prevail) ಹೊಂದಿರುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಪಿ.ಆರ್.703

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**ಭಾರತ ಸರ್ಕಾರವು ಜಾರಿಗೆ ತಂದಿರುವ ಮಾಹಿತಿ ಹಕ್ಕು ಅಧಿನಿಯಮ – 2005ರ ಕಾಯ್ದೆಯ ಕಲಂ 4(1)(ಬಿ) ರನ್ವಯ ಸಾಗರ ಉಪವಿಭಾಗಾಧಿಕಾರಿಗಳ ಕಾರ್ಯಾಲಯದ ಸಂಘಟನೆ ಮತ್ತು ಕರ್ತವ್ಯಗಳ ಬಗ್ಗೆ ಕೆಳಕಾಣಿಸಿದಂತೆ ವಿವರಗಳನ್ನು ಸಾರ್ವಜನಿಕರ ಮಾಹಿತಿಗಾಗಿ ಪ್ರಚುರಪಡಿಸಲಾಗಿದೆ.**

**(ದಿ: 01.04.2010ರಲ್ಲಿದ್ದಂತೆ)**

**ಸಾಗರ ಉಪವಿಬಾಗದ ಸಾಮಾನ್ಯ ಮಾಹಿತಿ:**

| **01. ಉಪವಿಭಾಗದ ತಾಲ್ಲೂಕ್‌ಗಳು** | **ಸಾಗರ** | **ಸೊರಬ** | **ಶಿಕಾರಿಪುರ** | **ಹೊಸನಗರ** |
|---|---|---|---|---|
| 02. ಉಪವಿಭಾಗದ ನಾಡ ಕಛೇರಿಗಳು | 1)ಆವಿನಹಳ್ಳಿ<br>2)ಸುಳ್ಳಳ್ಳಿ | 1)ಆನವಟ್ಟಿ<br>2)ಜಡೆ | 1) ಹೊಸೂರು<br>2) ತಾಳಗುಂದ & ಉಡುಗಣಿ | 1)ನಗರ<br>2)ಕೆರೆಹಳ್ಳಿ |
| 03. ಕಂದಾಯ ಹೋಬಳಿಗಳು | 1)ಕಸಬಾ<br>2)ಆನಂದಪುರಂ<br>3)ತಾಳಗುಪ್ಪ<br>4)ಆವಿನಹಳ್ಳಿ<br>5)ಕರೂರು<br>6)ಭಾರಂಗಿ | 1)ಕಸಬಾ<br>2)ಆನವಟ್ಟಿ<br>3)ಜಡೆ<br>4)ಉಳವಿ<br>5)ಚಂದ್ರಗುತ್ತಿ<br>6)ಕುಪ್ಪಗಡ್ಡೆ | 1)ಕಸಬಾ<br>2)ಉಡುಗಣಿ<br>3)ಅಂಜನಾಪುರ<br>4)ಹೊಸೂರು<br>5)ತಾಳಗುಂದ | 1)ಕಸಬಾ<br>2)ನಗರ<br>3)ಕೆರೆಹಳ್ಳಿ<br>4)ಹುಂಚಾ |
| 04. ಉಪವಿಭಾಗದ ಒಟ್ಟು ಗ್ರಾಮಗಳು | 238 | 306 | 176 | 204 |
| 05. ಗ್ರಾಮಲೆಕ್ಕಿಗರ ವೃತ್ತಗಳು | 39 | 56 | 69 | 36 |
| 06. ನಗರಸಭೆಗಳು | 01 | – | – | – |
| 07. ಪುರಸಭೆಗಳು | – | – | 01 | – |
| 08. ಪಟ್ಟಣ ಪಂಚಾಯತ್‌ಗಳು | 01 | 01 | 01 | 01 |
| 09. ಗ್ರಾಮ ಪಂಚಾಯತ್‌ಗಳು | 35 | 39 | 43 | 29 |
| 10. ಉಪವಿಭಾಗದ ಭೌಗೋಳಿಕ ವಿಸ್ತೀರ್ಣ | 194009 | 114767 | 90984 | 142279 |
| 11. ಉಪವಿಭಾಗದಲ್ಲಿ ಹರಿಯುವ ನದಿಗಳು | ಶರಾವತಿ ನದಿ, ವರದಾ ನದಿ | ದಂಡಾವತಿ ನದಿ, ವರದಾ ನದಿ | ಕುಮದ್ವತಿ ನದಿ | ಶರಾವತಿ ನದಿ, ಕುಮದ್ವತಿ ನದಿ |
| 12. ಉದ್ಯಮಗಳು ದೊಡ್ಡ ಪ್ರಮಾಣದಲ್ಲಿ | ಇಲ್ಲಾ | ಇಲ್ಲಾ | ಇಲ್ಲಾ | ಇಲ್ಲಾ |
| 13. ಪ್ರೇಕ್ಷಣೀಯ ಸ್ಥಳಗಳು | ಜೋಗ್‌ಫಾಲ್ಸ್, ಕೆಳದಿ, ಇಕ್ಕೇರಿ, ವರದಹಳ್ಳಿ | ಚಂದ್ರಗುತ್ತಿ, ಗುಡವಿ ಪಕ್ಷಿಧಾಮ, ಕೋಟಿಪುರ | ಬಳ್ಳಿಗಾವಿ, ಉಡುಗಣಿ, | ಹೊಂಬುಜ ಕ್ಷೇತ್ರ |

**ಸಾಗರ ಉಪವಿಭಾಗಾಧಿಕಾರಿಗಳ ಕಛೇರಿಗೆ ಮಂಜೂರಾದ ಹುದ್ದೆಗಳು:**

| | | |
|---|---|---|
| 01. | ಉಪವಿಬಾಗಾಧಿಕಾರಿಗಳು | 01 |
| 02. | ಭೂ ದಾಖಲೆಗಳ ಸಹಾಯಕ ನಿರ್ದೇಶಕರು | 01 |
| 03. | ವ್ಯವಸ್ಥಾಪಕರು | 01 |
| 04. | ಪ್ರಥಮ ದರ್ಜೆ ಸಹಾಯಕರು | 04 |
| 05. | ದ್ವಿತೀಯ ದರ್ಜೆ ಸಹಾಯಕರು | 02 |
| 06. | ದ್ವಿತೀಯ ದರ್ಜೆ ಭೂಮಾಪಕರು | 01 |
| 07. | ಶೀಘ್ರಲಿಪಿಗಾರರು | 01 |
| 08. | ಬೆರಳಚ್ಚುಗಾರರು | 01 |

| | | |
|---|---|---|
| 09. | ವಾಹನ ಚಾಲಕರು | 01 |
| 10. | ದಫೇದಾರ್ | 01 |
| 11. | ಡಿ ಸಮೂಹದ ನೌಕರರು | 02 |

**ಕಲಂ 4(1)ಬಿ (i)(ಅ) : ಕಛೇರಿಯ ವ್ಯವಸ್ಥೆ ಮತ್ತು ಕಾರ್ಯಗಳ ವಿವರ:**

ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿಗಳ / ನೌಕರರ ದೂರವಾಣಿ ಸಂಖ್ಯೆಗಳು

| ಕ್ರ. ಸಂ. | ಹೆಸರು ಶ್ರೀಯುತರುಗಳಾದ: | ಪದನಾಮ | ದೂರವಾಣಿ/ ಮೊಬೈಲ್ ನಂಬರ್ |
|---|---|---|---|
| 01 | ಡಾ॥ಪ್ರವೀಣ್ ಕುಮಾರ್ ಜಿ.ಎಲ್. | ಉಪವಿಭಾಗಾಧಿಕಾರಿ | 9900214875 |
| 02 | ಎಲ್.ಬಿ.ಚಂದ್ರಶೇಖರ | ವ್ಯವಸ್ಥಾಪಕರು | 9945810772 |
| 03 | ಜಿ.ಕೃಷ್ಣಪ್ಪ | ಪ್ರ.ದ.ಸ. | 9449287388 |
| 04 | ಸತೀಶ ಬಿ.ಜಿ. | ಪ್ರ.ದ.ಸ. | 9844075524 |
| 05 | ಟಿ.ಪರಮೇಶ್ವರ (ನಿಯೋಜನೆ ಮೇರೆ) | ದ್ವಿ.ದ.ಸ. | 9449028962 |
| 06 | ಮಮತಾ ಜಿ.ಶರ್ಮಾ | ದ್ವಿ.ದ.ಸ. | 9481935645 |
| 07 | ಬಿ.ಎಸ್.ರವೀಂದ್ರನಾಥ್ | ಬೆರಳಚ್ಚುಗಾರ | 9449080160 |
| 08 | ಎಂ.ಆರ್.ನರಸಿಂಹಮೂರ್ತಿ | ಬೆರಳಚ್ಚುಗಾರ | 08183221074 |
| 09 | ಬಿ.ಚನ್ನಕೇಶವ (ನಿಯೋಜನೆ ಮೇರೆ) | ಗ್ರಾ.ಲೆ. | 9986916321 |
| 10 | ನಾರಾಯಣ | ವಾಹನ ಚಾಲಕ | |
| 11 | ಬಿ.ಎನ್.ಕೃಷ್ಣಮೂರ್ತಿ(ನಿಯೋಜನೆ ಮೇರೆ) | ಪ್ರ.ದ.ಸ. | 08183265666 |
| 12 | ಡಿ.ರೇಣುಕಪ್ಪ (ನಿಯೋಜನೆ ಮೇರೆ) | ಪ್ರ.ದ.ಸ. | 9448841582 |
| 13 | ಮಂಜುಳಾ (ನಿಯೋಜನೆ ಮೇರೆ) | ಗ್ರಾ.ಲೆ. | 9449204718 |
| 14 | ಷಣ್ಮುಕ | ವಾಹನ ಚಾಲಕ | 9902944016 |
| 15 | ಮರಿಯಪ್ಪ | ದಫೇದಾರ್ | 08183296150 |
| 16 | ಕೆ.ಚೌಡಪ್ಪ | ಡಿ ಗ್ರೂಪ್ | |
| 17 | ಎಲ್.ಮಹಾದೇವಪ್ಪ | ಡಿ ಗ್ರೂಪ್ | 9449798879 |
| 18 | ದಾನಪ್ಪ | ಬಾಂದ್ ಜವಾನ | |

**(ಆ): ಉಪವಿಭಾಗಾಧಿಕಾರಿಗಳ ಪ್ರಕಾರ್ಯಗಳು:–**

**ಕಾರ್ಯವಿಧಾನ:**

ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ ಕಲಂ 10ರ ಅನ್ವಯ ಉಪವಿಭಾಗಕ್ಕೆ ಸಹಾಯಕ ಆಯುಕ್ತರನ್ನು ನಿಯಮಿಸಲಾಗಿರುತ್ತದೆ. ಉಪವಿಭಾಗಾಧಿಕಾರಿಗಳು ಉಪವಿಭಾಗದಲ್ಲಿನ ತಾಲ್ಲೂಕ್ ಕಛೇರಿಗಳ ಆಡಳಿತ ವ್ಯವಸ್ಥೆ ಹಾಗೂ ಕಾನೂನು ಸುವ್ಯವಸ್ಥೆ ಬಗ್ಗೆ ಮೇಲ್ವಿಚಾರಣೆ ಅಧಿಕಾರವುಳ್ಳವರಾಗಿದ್ದಾರೆ. ಅಲ್ಲದೆ ಉಪವಿಭಾಗದ ದಂಡಾಧಿಕಾರಿ ಹಾಗೂ ಆಡಳಿತ ಅಧಿಕಾರಿಯಾಗಿಯೂ ಸಹ ಕಾರ್ಯನಿರ್ವಹಿಸುತ್ತಿದ್ದಾರೆ.

**ii. ಸಂಸ್ಥೆಯ ಅಧಿಕಾರಿಗಳ ಅಧಿಕಾರ ವ್ಯಾಪ್ತಿ ಮತ್ತು ಕರ್ತವ್ಯಗಳು:**

| ಕ್ರ. ಸಂ. | ನೌಕರರ ಹೆಸರು (ಶ್ರೀಯುತರುಗಳಾದ) | ಪದನಾಮ | ವಹಿಸಿಕೊಟ್ಟ ಪ್ರಕಾರ್ಯಗಳು |
|---|---|---|---|
| 01 | ಡಾ॥ ಪ್ರವೀಣ್ ಕುಮಾರ್ ಜಿ.ಎಲ್. | ಉಪವಿಭಾಗಾಧಿಕಾರಿ | ಪ್ರತ್ಯಾಯೋಜಿಸಿದ ಅಧಿಕಾರದನ್ವಯ ಮೇಲ್ಕಂಡ ಕಾರ್ಯಗಳಡಿ ಅಂತಿಮ ನಿರ್ಣಯ ತೆಗೆದುಕೊಳ್ಳುವುದು. |
| 02 | ಎಲ್.ಬಿ.ಚಂದ್ರಶೇಖರ | ವ್ಯವಸ್ಥಾಪಕರು | ವಿಷಯ ನಿರ್ವಾಹಕರು ಮಂಡಿಸಿದ ಪ್ರಸ್ತಾವನೆಯನ್ನು ಪರಿಶೀಲಿಸಿ ತೆಗೆದುಕೊಳ್ಳಬಹುದಾದ ಕ್ರಮಗಳ ಬಗ್ಗೆ ತಿಳಿಸಿ ಉಪವಿಭಾಗಾದಿಕಾರಿಗಳವರಿಗೆ ಕಡತ ಸಲ್ಲಿಸುವುದು. |
| 03 | ಜಿ.ಕೃಷ್ಣಪ್ಪ | ಪ್ರ.ದ.ಸ. | ಸಿಬ್ಬಂದಿ, ಸಿ.ಸಿ.ಎ. & ಮುಜರಾಯಿ ಶಾಖೆ. |
| 04 | ಬಿ.ಜಿ.ಸತೀಶ | ಪ್ರ.ದ.ಸ. | ಭೂ ಕಂದಾಯ ಮೇಲ್ಮನವಿ, ಬಗರ್ ಹುಕುಂ ಮೇಲ್ಮನವಿ ಪ್ರಕರಣಗಳು, ದಾಖಲೆ ಕೋಣೆ ಶಾಖೆ |

| ಕ್ರ. ಸಂ. | ನೌಕರರ ಹೆಸರು (ಶ್ರೀಯುತರುಗಳಾದ) | ಪದನಾಮ | ವಹಿಸಿಕೊಟ್ಟ ಪ್ರಕಾರ್ಯಗಳು |
|---|---|---|---|
| 05 | ರೇಣುಕಪ್ಪ ಡಿ. | ಪ್ರ.ದ.ಸ. | ಚುನಾವಣೆ, ಭೂ ಸ್ವಾಧೀನ,ಭೂ ಪರಿವರ್ತನೆ ಶಾಖೆ |
| 06 | ಬಿ.ಎನ್.ಕೃಷ್ಣಮೂರ್ತಿ | ಪ್ರ.ದ.ಸ. | ಪ್ರಕೃತಿ ವಿಕೋಪ, ಆಹಾರ, ಇತರೆ ಶಾಖೆ. |
| 07 | ಟಿ.ಪರಮೇಶ್ವರ | ದ್ವಿ.ದ.ಸ. | ಭೂಮಿ, ನ್ಯಾಯಾಂಗ, ಭೂ ಸುಧಾರಣೆ, ಪಿ.ಟಿ.ಸಿ.ಎಲ್. ಶಾಖೆ |
| 08 | ಮಮತಾ ಜಿ.ಶರ್ಮಾ | ದ್ವಿ.ದ.ಸ. | ಪುರಸಭೆ, ಹಕ್ಕು ದಾಖಲೆ ತಿದ್ದುಪಡಿ, ಜೆ.ಎಂ.ಎ.ಶಾಖೆ |
| 09 | ಬಿ.ಎಸ್.ರವೀಂದ್ರನಾಥ್ | ಶೀಘ್ರಲಿಪಿಗಾರ | ಗಣಕ ಯಂತ್ರ ಶಾಖೆ, ದಿನಚರಿ, ಹೆಚ್.ಆರ್.ಎಂ.ಎಸ್. ನಿರ್ವಹಣೆ |
| 10 | ಎಂ.ಆರ್.ನರಸಿಂಹ ಮೂರ್ತಿ | ಬೆರಳಚ್ಚುಗಾರ | ಕಛೇರಿ ಪತ್ರ ವ್ಯವಹಾರಗಳ ಬೆರಳಚ್ಚು ಕಾರ್ಯ. |
| 11 | ಷಣ್ಮುಕ | ಜೀಪ್ ಚಾಲಕ | ವಾಹನ ಚಾಲನೆ & ನಿರ್ವಹಣೆ. |
| 12 | ಮಂಜುಳಾ | ಗ್ರಾ.ಲೆ. | ಆಮದು ಮತ್ತು ರಫ್ತು ಶಾಖೆ. |
| 13 | ಚನ್ನಕೇಶವ | ಗ್ರಾ.ಲೆ. | ಆಪ್ತ ಶಾಖೆ, ಸ್ಥಳ ತನಿಖೆ, ಸಂಸದರ ಅನುದಾನದ ಕಾಮಗಾರಿ, ತಾತ್ಕಾಲಿಕ ಪ್ರವಾಸ ಪಟ್ಟಿ, ದೂರವಾಣಿ ಫ್ಯಾಕ್ಸ್ ನಿರ್ವಹಣೆ. |
| 14 | ಮರಿಯಪ್ಪ | ದಫೇದಾರ್ | ಉಪವಿಭಾಗಾಧಿಕಾರಿಗಳ ಕೊಠಡಿ ನಿರ್ವಹಣೆ, ಟಪಾಲುಗಳು ಹಾಗೂ ಕಡತಗಳ ನಿರ್ವಹಣೆ. |
| 15 | ಚೌಡಪ್ಪ | ಡಿ ನೌಕರ | ಕಛೇರಿ ಸ್ವಚ್ಛಗೊಳಿಸುವುದು, ವ್ಯವಸ್ಥಾಪಕರು ಹಾಗೂ ಕಛೇರಿ ಸಿಬ್ಬಂದಿಗಳು ವಹಿಸುವ ಕೆಲಸ ಕಾರ್ಯಗಳ ನಿರ್ವಹಣೆ, ಸ್ಥಳೀಯ ಟಪಾಲುಗಳ ವಿತರಣೆ, ಅಂಚೆ ಕಛೇರಿ ಹಾಗೂ ಬ್ಯಾಂಕ್ ವ್ಯವಹರಣೆಯಲ್ಲಿ ಪಾಲ್ಗೊಳ್ಳುವುದು. |
| 16 | ಎಲ್.ಮಹಾದೇವಪ್ಪ | ಡಿ ನೌಕರ | |

**ಉಪವಿಭಾಗಾಧಿಕಾರಿಗಳ ಕಾರ್ಯಾಲಯದಲ್ಲಿ ಕೆಳಕಂಡ ಸಾಮಾನ್ಯ ಕಾರ್ಯಗಳನ್ನು ಪ್ರಮುಖವಾಗಿ ನಿರ್ವಹಿಸುತ್ತದೆ.**

01) ಉಪವಿಭಾಗದ ದಂಡಾಧಿಕಾರತ್ವದ ಮೂಲಕ ಕಾನೂನು ಮತ್ತು ಸುವ್ಯವಸ್ಥೆಯನ್ನು ಕಾಪಾಡುವುದು.

02) ಆಹಾರ ಮತ್ತು ನಾಗರೀಕ ಸರಬರಾಜು ಹಾಗೂ ಸಾರ್ವಜನಿಕ ವಿತರಣಾ ವ್ಯವಸ್ಥೆಯ ಬಗ್ಗೆ ಪರಿಶೀಲನೆ ಮಾಡುವುದು.

03) ಚುನಾವಣೆಯ ಎಲ್ಲಾ ಪ್ರಕ್ರಿಯೆಗಳ ಮೇಲ್ವಿಚಾರಣೆ ನೋಡಿಕೊಳ್ಳುವುದು.

04) ಪ್ರಕೃತಿ ವಿಕೋಪ ನಿರ್ವಹಣೆ,ನೈಸರ್ಗಿಕ ಮತ್ತು ಮಾನವ ನಿರ್ಮಿತ ವಿಕೋಪಗಳಿಂದ ಬಾದಿತರಾದವರಿಗೆ ಪರಿಹಾರ ನೀಡುವ ಬಗ್ಗೆ ತಹಶೀಲ್ದಾರರಿಂದ ಸ್ವೀಕರಿಸಿದ ಪ್ರಸ್ತಾವನೆಗಳನ್ನು ನಿಯಮಾನುಸಾರ ಪರಿಶೀಲಿಸಿ ಅರ್ಹ ಪ್ರಕರಣಗಳನ್ನು ಪರಿಹಾರ ಮಂಜೂರಿಗಾಗಿ ಜಿಲ್ಲಾಧಿಕಾರಿಗಳಿಗೆ ಶಿಫಾರಸ್ಸು ಮಾಡುವುದು.

05) ಸ್ವಾತಂತ್ರ್ಯ ಹೋರಾಟಗಾರರ ಪಿಂಚಣಿ ಮಂಜೂರಿಗಾಗಿ ಬರುವ ಅರ್ಜಿಗಳನ್ನು ಪರಿಶೀಲಿಸಿ ನಿಯಮಾನುಸಾರ ಜಿಲ್ಲಾಧಿಕಾರಿಗಳಿಗೆ ಶಿಫಾರಸ್ಸು ಮಾಡುವುದು.

06) ಸರಕಾರ ಮತ್ತು ಸಂಸ್ಥೆಗಳಿಗೆ ವಿವಿಧ ಉದ್ದೇಶಗಳಿಗೆ ಭೂ ಸ್ವಾಧೀನ ಪ್ರಕ್ರಿಯೆ ಕೈಗೊಳ್ಳುವುದು.

07) ಕರ್ನಾಟಕ ಭೂ ಕಂದಾಯ ಕಲಂ 136(2)ರ ಅಡಿಯಲ್ಲಿ ಮೇಲ್ಮನವಿ ಇತ್ಯರ್ಥಪಡಿಸುವುದು.

08) ಗ್ರಾಮಲೆಕ್ಕಾಧಿಕಾರಿಗಳ ವೃಂದದ ನೌಕರರಿಗೆ ಶಿಸ್ತು ಪ್ರಾಧಿಕಾರಿಯಾಗಿ ಕರ್ತವ್ಯ ನಿರ್ವಹಿಸುವುದು.

09) ಜಿಲ್ಲಾಧಿಕಾರಿಗಳಿಂದ ಆದೇಶಿಸಲ್ಪಟ್ಟ ಸಿ.ಸಿ.ಎ. ಪ್ರಕರಣಗಳ ವಿಚಾರಣೆ ನಡೆಸುವುದು.

10) ಜಮಾಬಂಧಿ ಕಾರ್ಯನಿರ್ವಹಿಸುವುದು.

11) ನೆಮ್ಮದಿ ಹಾಗೂ ಭೂಮಿ ಕೇಂದ್ರಗಳ ಮೇಲ್ವಿಚಾರಣೆ ನಡೆಸುವುದು.

**ಉಪವಿಭಾಗದ ದಂಡಾಧಿಕಾರಿಯಾಗಿ ಉಪವಿಬಾಗಾಧಿಕಾರಿಗಳು ಈ ಕೆಳಗಿನ ಕಾಯ್ದೆಗಳಡಿಯಲ್ಲಿ ಅಧಿಕಾರ ಹಾಗೂ ಕರ್ತವ್ಯ ಹೊಂದಿರುತ್ತಾರೆ.**

01. ದಂಡ ಪ್ರಕ್ರಿಯಾ ಸಂಹಿತೆ, 1974.

02. ಕರ್ನಾಟಕ ಪೊಲೀಸ್ ಅಧಿನಿಯಮ 1963.

03. ಜೀತದಾಳು ಪದ್ಧತಿ ಅಧಿನಿಯಮ 1976.

04. ಭಾರತೀಯ ಮುದ್ರಾಂಕಿತ ಅಧಿನಿಯಮ 1899.

05. ನ್ಯಾಯಾಧೀಶನ ಅಧಿನಿಯಮ 1965.

06. ಭಾರತ ತಂತಿ ಅಧಿನಿಯಮ 1985.

07. ಸಾರ್ವಜನಿಕ ಆರೋಗ್ಯ ಅಧಿನಿಯಮ 1964.

08. ಕರ್ನಾಟಕ ಮರಾಟಗಾರರ ಅಧಿನಿಯಮ 1957.

09. ನ್ಯಾಯವಾದಿಗಳ ಅಧಿನಿಯಮ 1961.

10. ಪರಿಶಿಷ್ಠ ಜಾತಿ ಪರಿಶಿಷ್ಠ ವರ್ಗಗಳ ಅಧಿನಿಯಮ 1989.

11. ಕರ್ನಾಟಕ ಆಹಾರ ಮತ್ತು ನಾಗರೀಕ ಸೇವಾ ಅಧಿನಿಯಮ.

12. ಮುಜರಾಯಿ ಇಲಾಖೆಗೆ ಸೇರಿದ ದೇವಸ್ಥಾನಗಳ ಜೀರ್ಣೋದ್ಧಾರ.

**ಉಪವಿಭಾಗಮಟ್ಟದ ಉಪವಿಭಾಗಾಧಿಕಾರಿ ಹೊಂದಿರುವ ಅಧಿಕಾರ, ಕಾಯ್ದೆಗಳ ಮತ್ತು ಕಾನೂನುಗಳ ವಿವರ:**

01. ಕರ್ನಾಟಕ ಭೂ ಕಂದಾಯ ಕಾಯ್ದೆ 1964 ಮತ್ತು ನಿಯಮಗಳು 1966.

02. ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961 ಮತ್ತು ನಿಯಮಾವಳಿ 1974.

03. ಕರ್ನಾಟಕ ಹಲವು ಇನಾಂ ರದ್ದಿಯಾತಿ ಅಧಿನಿಯಮ 1977.

04. ಭೂ ಸ್ವಾಧೀನ ಕಾಯ್ದೆ 1964.

05. ಕರ್ನಾಟಕ ಗ್ರಾಮ ನೌಕರಿಗಳ ರದ್ಧತಿ ಅಧಿನಿಯಮ 1961.

06. ಕರ್ನಾಟಕ ಋಣ ವಿಮೋಚನೆ ಅಧಿನಿಯಮ 1984.

07. ಮತದಾರರ ನೊಂದಣಿ ನಿಯಮಾವಳಿ 1960.

08. ಕರ್ನಾಟಕ ನೀರಾವರಿ ಅಧಿನಿಯಮ 1965.

**iii. ತೀರ್ಮಾನಗಳನ್ನು ತೆಗೆದುಕೊಳ್ಳುವಾಗ ಅನುಸರಿಸುವ ಕಾರ್ಯವಿಧಾನಗಳು:**

ಈ ಕಾರ್ಯಾಲಯದಲ್ಲಿ ಸರಕಾರದಿಂದ ಮೇಲಾಧಿಕಾರಿಗಳಿಂದ, ವಿವಿಧ ಕಛೇರಿಗಳಿಂದ ಹಾಗೂ ಸಾರ್ವಜನಿಕರಿಂದ ಸ್ವೀಕೃತವಾಗುವ ಎಲ್ಲಾ ಕಾಗದ ಪತ್ರಗಳನ್ನು ಮತ್ತು ಕಡತಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ಸ್ವೀಕರಿಸಿ ಕಛೇರಿ ವ್ಯವಸ್ಥಾಪಕರ ಮುಖಾಂತರ ಉಪವಿಭಾಗಾಧಿಕಾರಿಗಳ ಗಮನಕ್ಕೆ ತರಲಾಗುತ್ತದೆ. ನಂತರ ಅವುಗಳನ್ನು ಕೆಳಕಾಣಿಸಿರುವ ಸಂಬಂಧಿತ ಸಂಕಲನಕ್ಕೆ ವಿತರಣೆ ಮಾಡಲಾಗುತ್ತದೆ. ಸಂಕಲನಕ್ಕೆ ಸಂಬಂಧಿಸಿದ ಸಿಬ್ಬಂದಿ ವರ್ಗದವರು ನಿಯಮಾನುಸಾರ ಪರಿಶೀಲಿಸಿ ಕಡತಗಳನ್ನು ವ್ಯವಸ್ಥಾಪಕರ ಮುಖಾಂತರ ಉಪವಿಬಾಗಾಧಿಕಾರಿಗಳಿಗೆ ಮಂಡಿಸುತ್ತಾರೆ. ಸಂಬಂಧಿಸಿದ ಶಾಖೆಗಳ ವಿಷಯಗಳಲ್ಲಿ ಅಂತಿಮ ತೀರ್ಮಾನವನ್ನು ಉಪವಿಭಾಗಾಧಿಕಾರಿಗಳು ಕೈಗೊಳ್ಳುತ್ತಾರೆ.

**iv. ಉಪವಿಭಾಗದ ಕಾರ್ಯಾಲಯ ಮೇಲ್ವಿಚಾರಣೆ ಮತ್ತು ಹೊಣೆಗಾರಿಕೆಗಳ ಮಾರ್ಗಗಳು ಸೇರಿದಂತೆ ತೀರ್ಮಾನ ತೆಗೆದುಕೊಳ್ಳುವ ಪ್ರಕ್ರಿಯೆಯಲ್ಲಿ ಅನುಸರಿಸಬೇಕಾದ ಕಾರ್ಯ ವಿಧಾನ:**

**ಕಂದಾಯ ಆಡಳಿತ:**

01. ತಾಲ್ಲೂಕಿನ ಭೂ ದಾಖಲೆಗಳ ನಿರ್ವಹಣೆ ಮತ್ತು ಎಲ್ಲಾ ಜಮೀನುಗಳ ಭೂಮಾಪನ ಕ್ರಿಯೆಯ ಮೇಲ್ವಿಚಾರಣೆ ಪ್ರಗತಿ ಪರಿಶೀಲನೆ.

02. ಭೂ ಮಂಜೂರಾತಿ ಪರಿಶೀಲಿಸಿ ಸೂಕ್ತ ಪ್ರಾಧಿಕಾರಕ್ಕೆ ಶಿಫಾರಸ್ಸು ಮಾಡುವುದು.

03. ಭೂ ಸುಧಾರಣೆ ನಿಯಮ 77(ಎ) ಅಡಿ ಅರ್ಜಿಗಳನ್ನು ಪರಿಶೀಲನೆ ಮಾಡಿ ವಿಲೆಗೊಳಿಸುವುದು.

04. ಭೂ ನ್ಯಾಯ ಮಂಡಳಿಗಳ ಅಧ್ಯಕ್ಷರಾಗಿ ಕಾರ್ಯನಿರ್ವಹಿಸುವುದು.

05. ಭೂ ಸುಧಾರಣೆ ಅಡಿ ಹೆಚ್ಚುವರಿ ಭೂಮಿಗಳನ್ನು ಅರ್ಹರಿಗೆ ವಿತರಣೆ ಮಾಡುವುದು.

06. ಭೂ ಸುಧಾರಣೆ ಕಾಯ್ದೆ 1961ರ ಕಲಂ 80ರ ಅಡಿ ಜಮೀನು ಖರೀದಿಸಲು ಅನುಮತಿ ನೀಡುವುದು.

**v. ಕಛೇರಿಯ ಕಾರ್ಯಗಳ ನಿರ್ವಹಣೆಗೆ ರೂಪಿಸಿರುವ ಸೂತ್ರಗಳು:**

ಸಾರ್ವಜನಿಕರುಗಳಿಂದ ಹಾಗೂ ಇತರೆ ಕಛೇರಿಗಳಿಂದ ಬಂದಂತಹ ಟಪಾಲುಗಳನ್ನು ವ್ಯವಸ್ಥಾಪಕರು ಹಾಗೂ ಉಪವಿಭಾಗಾಧಿಕಾರಿಗಳ ಗಮನಕ್ಕೆ ಹೋಗಿ ಬಂದ ನಂತರ ಸ್ವೀಕೃತಿ ವಿಭಾಗದಲ್ಲಿ ನೊಂದಾಯಿಸಿಕೊಂಡು, ಸಂಬಂಧಪಟ್ಟ ಶಾಖೆಯ ವಿಷಯ ನಿರ್ವಾಹಕರಿಗೆ ನೀಡಲಾಗುವುದು. ವಿಷಯ ನಿರ್ವಾಹಕರುಗಳು ಸ್ವೀಕೃತಿಯಾದ ಪತ್ರಗಳನ್ನು ಕೂಲಂಕುಷವಾಗಿ ಪರಿಶೀಲನೆ ಮಾಡಿ, ಕಾನೂನು ಅನುಸರಿಸಿ ಕ್ರಮಕೈಗೊಂಡು ವ್ಯವಸ್ಥಾಪಕರ ಪರಿಶೀಲನೆಯೊಂದಿಗೆ ಉಪವಿಭಾಗಾಧಿಕಾರಿಗಳ ಗಮನಕ್ಕೆ ಸಲ್ಲಿಸಿ ಅವರ ಆದೇಶಾನುಸಾರ ಶೀಘ್ರವಾಗಿ ವಿಲೇವಾರಿ ಕ್ರಮಕೈಗೊಳ್ಳಲಾಗುತ್ತಿದೆ.

**vi. ಕಛೇರಿಯ ನೌಕರರು ಕರ್ತವ್ಯ ನಿರ್ವಹಿಸಲು ಅನುಸರಿಸುವ ನಿಯಮಗಳು, ಸೂಚನೆಗಳು, ಕೈಪಿಡಿಗಳು, ವಿನಿಯಮಗಳು, ಅನುಸೂಚಿಗಳು, ದಾಖಲೆಗಳು:**

**ಉಪವಿಭಾಗಾಧಿಕಾರಿಗಳ ಕಛೇರಿಯಲ್ಲಿ ಈ ಕೆಳಕಂಡ ಕಾಯ್ದೆಗಳಡಿ ಕಾರ್ಯನಿರ್ವಹಿಸುತ್ತದೆ..**

01. ಕರ್ನಾಟಕ ಭೂ ಕಂದಾಯ ಅಧಿನಿಯಮ 1964

02. ಕರ್ನಾಟಕ ಭೂ ಕಂದಾಯ ನಿಯಮ 1966

03. ಕರ್ನಾಟಕ ಭೂ ಮಂಜೂರಾತಿ ನಿಯಮ 1969

04. ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961

05. ಕರ್ನಾಟಕ ಪರಿಶಿಷ್ಠ ಜಾತಿ/ಪರಿಶಿಷ್ಠ ಪಂಗಡಗಳ (ಹಲವು ಜಮೀನುಗಳ ಪರಭಾರ ನಿಷೇಧ) ಅಧಿನಿಯಮ 1978 ನಿಯಮ 1979

06. ಭೂ ಸ್ವಾಧೀನ ಅಧಿನಿಯಮ 1894

07. ಮತದಾರರ ನೊಂದಣಿ ನಿಯಮ 1960
08. ಕರ್ನಾಟಕ ಸಾರ್ವಜನಿಕ ಅಫೆನ್ಸಗಳು ಅಧಿಕೃತ ಅನುಭವದಾರರನ್ನು ಹೊರಹಾಕುವುದು 1974.
09. ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993
10. ಕರ್ನಾಟಕ ನಾಗರೀಕ ಸೇವಾ ನಿಯಮ 1958
11. ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957
12. ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮ 1956
13. ಸಿವಿಲ್ ಪ್ರಕ್ರಿಯಾ ಸಂಹಿತೆ 1908
14. ದಂಡ ಪ್ರಕ್ರಿಯಾ ಸಂಹಿತೆ 1974
15. ಕರ್ನಾಟಕ ಪೊಲೀಸ್ ಅಧಿನಿಯಮ 1963
16. ಭಾರತ ಸಾಕ್ಷ್ಯ ಅಧಿನಿಯಮ 1972
17. ಕಾಲಪರಿಮಿತಿ ಅಧಿನಿಯಮ 1963
18. ಕರ್ನಾಟಕ ನೀರಾವರಿ ಅಧಿನಿಯಮ 1965
19. ಕರ್ನಾಟಕ ನೀರಾವರಿ (ನೀರಿನ ಕರ ಆಕರಣ) ಅಧಿನಿಯಮ 1965
20. ಪರಿಶಿಷ್ಟ ಜಾತಿ /ಪರಿಶಿಷ್ಟ ಪಂಗಡಗಳ (ದೌರ್ಜನ್ಯ) ಅಧಿನಿಯಮ 1989
21. ಜೀತದಾಳು ಪದ್ಧತಿ ಅಧಿನಿಯಮ 1976
22. ವಕ್ಫ್ ಅಧಿನಿಯಮ 1954
23. ಅಪರಾಧಿಕ ಕಾನೂನು ಮತ್ತು ಕೈದಿಗಳನ್ನು ಗುರುತಿಸುವುದು (ಕರ್ನಾಟಕ ವ್ಯಾಪ್ತಿ ಮತ್ತು ತಿದ್ದುಪಡಿ) ಅಧಿನಿಯಮ 1975
24. ಕರ್ನಾಟಕ ಆರ್ಥಿಕ ಸಂಹಿತೆ
25. ಮಾಹಿತಿ ಹಕ್ಕು ಅಧಿನಿಯಮ, 2005
26. ಸಾದಿಲ್ವಾರು ವೆಚ್ಚ ನಿಯಮ (ಎಂ.ಸಿ.ಇ.)
27. ಕರ್ನಾಟಕ ಪುರಸಭೆ ಅಧಿನಿಯಮ 1964.

**vii. ಕಛೇರಿಯಲ್ಲಿ ಲಭ್ಯವಾಗುವ ದಾಖಲೆಗಳ ಸ್ವರೂಪಗಳು, ದಸ್ತಾವೇಜುಗಳ ಪಟ್ಟಿ ಹಾಗೂ ನಾಗರೀಕರಿಗೆ ಕಛೇರಿಯಲ್ಲಿ ಒದಗುವ ಸೌಕರ್ಯದ ವಿವರ:**

**ಕಾಗದ ಪತ್ರಗಳ ಸ್ವೀಕೃತಿ ವಿಲೇವಾರಿ:**

ಸಾರ್ವಜನಿಕರಿಂದ ಅಧೀನ ಕಛೇರಿಗಳಿಗೆ ಮತ್ತು ಸರಕಾರ ಹಾಗೂ ಮೇಲಾಧಿಕಾರಿಗಳಿಂದ ಬರುವಂತಹ ಎಲ್ಲಾ ಕಾಗದ ಪತ್ರಗಳನ್ನು / ಕಡತಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ಸ್ವೀಕರಿಸಿ ಸಾರ್ವಜನಿಕರ ಮನವಿ ಬಗ್ಗೆ ಸ್ಥಳದಲ್ಲಿ ಸ್ವೀಕೃತಿ ಪತ್ರವನ್ನು ನೀಡಿದ ನಂತರ ಕಛೇರಿಯ ವ್ಯವಸ್ಥಾಪಕರ ಮುಖಾಂತರ ಉಪವಿಭಾಗಾಧಿಕಾರಿಗಳ ಗಮನಕ್ಕೆ ತರಲಾಗುತ್ತದೆ. ನಂತರ ಅವರ ನಿರ್ದೇಶನದ ಮೇರೆಗೆ ಈ ಕೆಳಕಂಡಂತೆ ಶಾಖೆಗಳನ್ನು ನಿರ್ವಹಿಸುವ ಸಂಬಂಧಪಟ್ಟ ವಿಷಯ ನಿರ್ವಾಹಕರುಗಳಿಗೆ ನೀಡಿ ಸೂಕ್ತ ಕಾನೂನು ಅನುಸರಿಸಿ ಕ್ರಮಕೈಗೊಳ್ಳಲಾಗುತ್ತದೆ.

(1) ಭೂ ಸ್ವಾಧೀನ (2)ಭೂ ಸ್ವಾಧೀನ(ಸಂಕೀರ್ಣ) (3) ಸಿಬ್ಬಂದಿ (4) ಸಿ.ಸಿ.ಎ. (5)ಪುರಸಭೆ (6)ನ್ಯಾಯಾಂಗ (7)ಆಶ್ರಯ (8)ಆಡಳಿತ (9)ನೈ.ವಿ. (10)ಭೂಮಿ (11)ಹಕ್ಕು ದಾಖಲೆ (12)ಮೇಲ್ಮನವಿ (13)ಇನಾಂ (14)ಅಭಿಲೇಖಾಲಯ (15)ಮಾ.ಹ. (16)ಭೂ ಸುಧಾರಣೆ (17)ಪಿ.ಟಿ.ಸಿ.ಎಲ್. (18)ಮುಜರಾಯಿ (19)ಆಹಾರ (20)ಬ.ಹು.ಮೇ. (21)ಭೂ ಪರಿವರ್ತನೆ (22) ಚುನಾವಣೆ

**viii. ಸಂಸ್ಥೆಯ ನೀತಿ ನಿಯಮಗಳ ರಚನೆ ಹಾಗೂ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಸಾರ್ವಜನಿಕರ ಅಭಿಪ್ರಾಯ ಪಡೆಯುವ ವ್ಯವಸ್ಥೆ:**

ಉಪವಿಭಾಗಾಧಿಕಾರಿಗಳ ಕಛೇರಿಗೆ ಬರುವ ಕಡತಗಳು ಪ್ರಾಥಮಿಕವಾಗಿ ತಾಲ್ಲೂಕುಮಟ್ಟದಲ್ಲಿ ಸಾರ್ವಜನಿಕರ ಅಭಿಪ್ರಾಯ ಪಡೆದು ಕಡತವನ್ನು ತಯಾರಿಸಿ ಸೂಕ್ತ ಶಿಫಾರಸ್ಸಿನೊಂದಿಗೆ ಬರುವಂತಹವುಗಳಾಗಿದ್ದು, ಆ ನಂತರದಲ್ಲಿ ಕಾನೂನಿನ ಚೌಕಟ್ಟಿನಲ್ಲಿ ಕ್ರಮಕೈಗೊಂಡು ಸೂಕ್ತ ಕ್ರಮಕ್ಕಾಗಿ ಮೇಲಾಧಿಕಾರಿಗಳಿಗೆ ಸಲ್ಲಿಸಲಾಗುತ್ತಿರುತ್ತದೆ.

**ix. ತನ್ನ ಅಧೀನಕ್ಕೊಳಪಡುವ ಸಮಿತಿಗಳ ಸಭೆಗಳಿಗೆ ಸಾರ್ವಜನಿಕ ಪ್ರವೇಶ ಹಾಗೂ ಸಾರ್ವಜನಿಕರಿಗೆ ಮುಕ್ತವಾಗಿರುವ ಬಗ್ಗೆ ಹಾಗೂ ಸಭಾ ನಡಾವಳಿಗಳ ವಿವರ ನೀಡುವ ಅವಕಾಶ:**

ಸಾಗರ ಹಾಗೂ ಹೊಸನಗರ ತಾಲ್ಲೂಕಿನ ನಮೂನೆ 7ಎ ಪ್ರಕರಣಗಳ ಪ್ರಾಧಿಕೃತ ಅಧಿಕಾರಿಯಾಗಿರುತ್ತಾರೆ. ಸಾಗರ ಹಾಗೂ ಹೊಸನಗರ ತಾಲ್ಲೂಕಿನ ಭೂ ನ್ಯಾಯ ಮಂಡಳಿಗೆ ಅಧ್ಯಕ್ಷರು ಹಾಗೂ ಸಾಗರ ಉಪವಿಭಾಗದ ಸಾಗರ, ಸೊರಬ, ಹೊಸನಗರ ಹಾಗೂ ಶಿಕಾರಿಪುರ ತಾಲ್ಲೂಕುಗಳ ರೈತ ಆತ್ಮಹತ್ಯೆ ತಾಲ್ಲೂಕು ಸಮಿತಿಗಳ ಅಧ್ಯಕ್ಷರಾಗಿದ್ದು, ಸದರೀ ಸಮಿತಿಗಳಲ್ಲಿ ಕೈಗೊಂಡ ನಡಾವಳಿಗಳು ಸಾರ್ವಜನಿಕರಿಗೆ ಲಭ್ಯವಿರುತ್ತವೆ.

**ix ಮತ್ತು x: ಉಪವಿಭಾಗಾಧಿಕಾರಿಗಳು ಕಾರ್ಯಾಲಯದಲ್ಲಿನ ಅಧಿಕಾರಿಗಳ ಮತ್ತು ಸಿಬ್ಬಂದಿಗಳ ಮಾಹಿತಿ (Directory) ಹಾಗೂ ಅವರು ಪಡೆಯುವ ವೇತನದ ವಿವರಗಳು:**

| ಕ್ರ. ಸಂ. | ಅಧಿಕಾರಿಗಳ & ನೌಕರರ ಹೆಸರು ಶ್ರೀಯುತರುಗಳಾದ: | ಪದನಾಮ | ಪಡೆಯುತ್ತಿರುವ ನಿವ್ವಳ ವೇತನ |
|---|---|---|---|
| 1 | ಡಾ॥ಪ್ರವೀಣ್ ಕುಮಾರ್ ಜಿ.ಎಲ್., ಕೆ.ಎ.ಎಸ್., | ಉಪವಿಭಾಗಾಧಿಕಾರಿ | 23288 |
| 2. | ಎಲ್.ಬಿ.ಚಂದ್ರಶೇಖರ | ವ್ಯವಸ್ಥಾಪಕರು | 11111 |
| 3. | ಜಿ.ಕೃಷ್ಣಪ್ಪ | ಪ್ರಥಮ ದರ್ಜೆ ಸಹಾಯಕ | 13205 |
| 4. | ಪಿ.ಸೋಮಶೇಖರ (ನಿಲಂಭನೆ) | ಪ್ರಥಮ ದರ್ಜೆ ಸಹಾಯಕ | 3234 |
| 5. | ಸತೀಶ ಬಿ.ಜಿ. | ಪ್ರಥಮ ದರ್ಜೆ ಸಹಾಯಕ | 9754 |
| 6. | ಬಿ.ಎನ್.ಕೃಷ್ಣಮೂರ್ತಿ (ನಿಯೋಜನೆ ಮೇರೆಗೆ–ಸೊರಬದಿಂದ) | ಪ್ರಥಮ ದರ್ಜೆ ಸಹಾಯಕ | |
| 7. | ಟಿ.ಪರಮೇಶ್ವರ (ನಿಯೋಜನೆ ಮೇರೆಗೆ) | ದ್ವಿತೀಯ ದರ್ಜೆ ಸಹಾಯಕ | |
| 8. | ಕಲ್ಲಪ್ಪ ಮೆಣಸಿನಾಳ್ (ನಿಯೋಜನೆ ಮೇರೆಗೆ ಸಾಗರ ತಾಲ್ಲೂಕ್ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ) | ದ್ವಿತೀಯ ದರ್ಜೆ ಸಹಾಯಕ | 9781 |
| 9. | ಶ್ರೀಮತಿ ಮಮತಾ ಜಿ.ಶರ್ಮಾ | ದ್ವಿತೀಯ ದರ್ಜೆ ಸಹಾಯಕ | 7787 |
| 10. | ಬಿ.ಎಸ್.ರವೀಂದ್ರನಾಥ್ | ಬೆರಳಚ್ಚುಗಾರ | 13655 |
| 11. | ಎಂ.ಆರ್.ನರಸಿಂಹ ಮೂರ್ತಿ | ಬೆರಳಚ್ಚುಗಾರ | 12516 |
| 12. | ಬಿ.ಚನ್ನಕೇಶವ(ನಿಯೋಜನೆ ಮೇರೆಗೆ ಸಾಗರದಿಂದ) | ಗ್ರಾಮಲೆಕ್ಕಿಗ (ನಿಯೋಜನೆ ಮೇರೆಗೆ) | |
| 13. | ಡಿ.ರೇಣುಕಪ್ಪ (ನಿಯೋಜನೆ ಮೇರೆಗೆ ಶಿಕಾರಿಪುರದಿಂದ) | ಪ್ರ.ದ.ಸ. (ನಿಯೋಜನೆ ಮೇರೆಗೆ) | |
| 14. | ಮಂಜುಳಾ (ನಿಯೋಜನೆ ಮೇರೆಗೆ ಸಾಗರದಿಂದ) | ಗ್ರಾಮಲೆಕ್ಕಿಗ (ನಿಯೋಜನೆ ಮೇರೆಗೆ) | |
| 15. | ನಾರಾಯಣ(ನಿಯೋಜನೆ ಮೇರೆಗೆ ಹೊಸನಗರದಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ) | ವಾಹನ ಚಾಲಕ | 11430 |
| 16. | ಷಣ್ಮುಕ (ಪಂ.ರಾ.ಇಂ. ಇಲಾಖೆಯಿಂದ ನಿಯೋಜನೆ ಮೇರೆಗೆ ಕಾರ್ಯನಿರ್ವಹಿಸುತ್ತಿದ್ದಾರೆ) | ವಾಹನ ಚಾಲಕ (ನಿಯೋಜನೆ ಮೇರೆಗೆ) | |
| 17. | ಮರಿಯಪ್ಪ | ದಫೇದಾರ್ | **8335** |
| 18. | ಎಲ್.ಮಹಾದೇವಪ್ಪ | ಡಿ ಗ್ರೂಪ್ ನೌಕರ | 6397 |
| 19. | ಕೆ.ಚೌಡಪ್ಪ | ಡಿ ಗ್ರೂಪ್ ನೌಕರ | 8638 |
| 20. | ದಾನಪ್ಪ (ನಿಯೋಜನೆ ಮೇರೆಗೆ ರಿಪ್ಪನ್‌ಪೇಟೆ ನಾಡಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ) | ಬಾಂಡ್ ಜವಾನ | 10379 |

**xi. ಯೋಜನೆ ವಿವರಗಳು:** ಪ್ರಸ್ತಾವಿಕ ವೆಚ್ಚಗಳು ಮತ್ತು ಬಟವಾಡೆ ಮಾಡಿದ ವರದಿಗಳನ್ನೊಳಗೊಂಡಂತೆ ಪ್ರತಿ ಏಜೆನ್ಸಿಗೂ ಹಂಚಿಕೆ ಮಾಡಿದ ಆಯವ್ಯಯ:

ಈ ಕಾರ್ಯಾಲಯದಿಂದ ಯಾವುದೇ ಅನುದಾನವನ್ನು ಹಂಚಿಕೆ ಮಾಡುವುದಾಗಲೀ ಇರುವುದಿಲ್ಲ. ಆದರೆ ನೌಕರರ ವೇತನ, ಕಛೇರಿ ವೆಚ್ಚಗಳನ್ನು ಮಾತ್ರ ಭರಿಸುತ್ತಿದ್ದು, ವಿವರ ಕೆಳಗಿನಂತಿರುತ್ತದೆ.

**ಲೆಕ್ಕ ಶೀರ್ಷಿಕೆ: 2053–94–1–01**

| 2009–10 | 041 ಪ್ರಯಾಣ ವೆಚ್ಚ ರೂ. | 051 ಸಾಮಾನ್ಯ ವೆಚ್ಚ ರೂ. | 052 ದೂರವಾಣಿ ವೆಚ್ಚ ರೂ. | 071 ಕಟ್ಟಡ ವೆಚ್ಚ ರೂ. | 195 ಸಾರಿಗೆ ವೆಚ್ಚ ರೂ. | ವೇತನ ವೆಚ್ಚ (NP) ರೂ. | ಜುಮ್ಲಾ ರೂ. |
|---|---|---|---|---|---|---|---|
| ಬಿಡುಗಡೆ (PLAN) | 57500 | 35000 | 64500 | 49000 | 246500 | – | 452500 |
| ವೆಚ್ಚ | 55749 | 35000 | 64500 | 14809 | 224492 | 2494781 | 2889331 |

**xii. ಹಣ ಹಂಚಿಕೆ ಮಾಡಿ ವಿವರಗಳನ್ನೊಳಗೊಂಡಂತೆ ಕಾರ್ಯಕ್ರಮಗಳು ಫಲಾನುಭವಿಗಳ ವಿವರ ಹಾಗೂ ಸಹಾಯ ಧನ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವ ವಿಧಾನ:**

ಯಾವುದೂ ಇರುವುದಿಲ್ಲ.

**xiii.** ರಿಯಾಯಿತಿಗಳು, ಅಪ್ಪಣೆ ಪತ್ರಗಳು ಅಥವಾ ಅಧಿಕಾರ ಪತ್ರಗಳನ್ನು ಪಡೆದವರ ವಿವರಗಳು:

**ಯಾವುದೇ ರಿಯಾಯಿತಿಗಳು, ಅಪ್ಪಣೆ ಪತ್ರಗಳನ್ನು ಈ ಪ್ರಾಧಿಕಾರದಿಂದ ಮಂಜೂರು ಮಾಡಿರುವುದಿಲ್ಲ.**

**xiv. ಉಪವಿಭಾಗದಲ್ಲಿ ದೊರೆಯುವ ಅಥವಾ ಹೊಂದಿರುವ ಮಾಹಿತಿಗಳ ವಿವರಗಳು:**

ಈ ಕಾರ್ಯಾಲಯದಲ್ಲಿ ಮೇಲೆ ರೂಪಿಸಲಾದ ಕಾಯ್ದೆ ನಿಯಮಗಳ ಅಡಿ ನಿರ್ವಹಿಸುವ ಎಲ್ಲಾ ಕಡತಗಳಲ್ಲಿ ಅಂತಿಮ ಆದೇಶ ನೀಡಿದ ನಂತರ ಮುಕ್ತಾಯವಾದ ಪ್ರತಿ ಕಡತಗಳ ಪ್ರಾಮುಖ್ಯತೆಯನ್ನಾಧರಿಸಿ ಪ್ರವರ್ಗ ಎ,ಬಿ,ಸಿ,ಡಿ ಮತ್ತು ಇ ಶ್ರೇಣಿಯಡಿ ವರ್ಗೀಕರಿಸಿ ನಿರ್ವಹಿಸಲಾಗುತ್ತಿದೆ. ಆಯಾ ಶ್ರೇಣಿವಾರು ತೀರಿಕೆ ಅವಧಿ ಈ ಕೆಳಗಿನಂತಿರುತ್ತದೆ.

| | | | |
|---|---|---|---|
| ಎ ಶ್ರೇಣಿ | ಶಾಶ್ವತ ಅವಧಿ | ಡಿ ಶ್ರೇಣಿ | 15 ವರ್ಷಗಳ ಅವಧಿ |
| ಬಿ ಶ್ರೇಣಿ | 30 ವರ್ಷಗಳ ಅವಧಿ | ಇ ಶ್ರೇಣಿ | 01 ವರ್ಷದ ಅವಧಿ |
| ಸಿ ಶ್ರೇಣಿ | 10 ವರ್ಷಗಳ ಅವಧಿ | | |

**xv. ಗ್ರಂಥಾಲಯವನ್ನು ಸಾರ್ವಜನಿಕರ ಬಳಕೆಗೆ ನಿರ್ವಹಿಸಿದ್ದಲ್ಲಿ, ಗ್ರಂಥಾಲಯವು ಅಥವಾ ವಾಚನಾಲಯವು ಕಾರ್ಯನಿರ್ವಹಿಸುವ ಸಮಯ ಹಾಗೂ ಸಾರ್ವಜನಿಕರಿಗೆ ಮಾಹಿತಿಯನ್ನು ಪಡೆಯಲು ಇರುವ ಅನುಕೂಲತೆಗಳ ವಿವರಗಳು:**

ಸಾರ್ವಜನಿಕರ ಬಳಕೆಗೆ ಗ್ರಂಥಾಲಯ ನಿರ್ವಹಿಸಿಲ್ಲ. ಆದರೆ ಸಾರ್ವಜನಿಕರಿಗೆ ಮಾಹಿತಿ ಒದಗಿಸುವುದಕ್ಕಾಗಿ ಆಡಳಿತ ಶಾಖೆಯಲ್ಲಿ ಮಾಹಿತಿ ಹಕ್ಕು ಕೋಶ ತೆರೆಯಲಾಗಿದ್ದು, ಸಾರ್ವಜನಿಕರು ಕಛೇರಿ ಸಮಯದಲ್ಲಿ ಮಾಹಿತಿಗಳನ್ನು ಕೋರಬಹುದಾಗಿದೆ.

**xvi. ಸಾರ್ವಜನಿಕ ಸಂಪರ್ಕಾಧಿಕಾರಿಗಳ ಹೆಸರು, ಪದನಾಮ ಮತ್ತು ಇತರೆ ವಿವರಗಳು.**

| ಕ್ರ. ಸಂ. | ಇಲಾಖೆ ಹೆಸರು | ಮಾಹಿತಿ ಹಕ್ಕು ಅಧಿನಿಯಮ 2005ರ ಕಲಂ 5(1)ರ ಪ್ರಕಾರ ಸಾರ್ವಜನಿಕ ಮಾಹಿತಿ ಅಧಿಕಾರಿ | ಮಾಹಿತಿ ಹಕ್ಕು ಅಧಿನಿಯಮ 2005ರ ಕಲಂ 5(5)ರ ಪ್ರಕಾರ ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ | ಮಾಹಿತಿ ಹಕ್ಕು ಅಧಿನಿಯಮ 2005ರ ಕಲಂ 19ರ ಪ್ರಕಾರ ಮೇಲ್ಮನವಿ ಪ್ರಾಧಿಕಾರಿ |
|---|---|---|---|---|
| 1. | ಕಂದಾಯ ಇಲಾಖೆ | ಡಾ॥ ಪ್ರವೀಣ್ ಕುಮಾರ್ ಜಿ.ಎಲ್., ಕೆ.ಎ.ಎಸ್.ಉಪವಿಭಾಗಾಧಿಕಾರಿ & ಉಪವಿಬಾಗದ ದಂಡಾಧಿಕಾರಿಗಳು, ಸಾಗರ ಉಪವಿಭಾಗ, ಸಾಗರ. 9900214875 08183 – 226601 (ಕಛೇರಿ) | ಎಲ್.ಬಿ.ಚಂದ್ರಶೇಖರ, ವ್ಯವಸ್ಥಾಪಕರು, ಉಪವಿಭಾಗಾಧಿಕಾರಿಗಳ ಕಛೇರಿ, ಸಾಗರ ಉಪವಿಭಾಗ, ಸಾಗರ 9945810772 | ಪಂಕಜ್ ಕುಮಾರ್ ಪಾಂಡೆ, ಭಾ.ಆ.ಸೇ. ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ. 08182–2222081 |

**xvii. ಮಾಹಿತಿ ಹಕ್ಕು ಕಾಯ್ದೆ ಅಡಿಯಲ್ಲಿ ಸ್ವೀಕರಿಸಿದ ಅರ್ಜಿಗಳು ಮತ್ತು ವಿಲೇವಾರಿ ಮಾಡಿದ ಬಗ್ಗೆ ವಿವರಗಳು:**

| ವರ್ಷ | ಸ್ವೀಕರಿಸಿದ ಒಟ್ಟು ಅರ್ಜಿಗಳು | ವಿಲೇವಾರಿ ಮಾಡಿದ ಒಟ್ಟು ಅರ್ಜಿಗಳು | ಉಳಿಕೆ ಅರ್ಜಿಗಳು |
|---|---|---|---|
| 2005–06 | 15 | 15 | – |
| 2006–07 | 49 | 49 | – |
| 2007–08 | 50 | 50 | – |
| 2008–09 | 60 | 60 | – |
| 2009–10 | 94 | 91 | 03 |

**ಡಾ॥ ಪ್ರವೀಣ್ ಕುಮಾರ್ ಜಿ.ಎಲ್.**

ಪಿ.ಆರ್.1292

ಉಪವಿಭಾಗಾಧಿಕಾರಿ,

ಸಾಗರ ಉಪವಿಭಾಗ, ಸಾಗರ.

## ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿ

**ವಿಷಯ:** ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು, ಹುಲಗೇರಿ ಗ್ರಾಮದಲ್ಲಿ ಪಿಂಕ್ ಗ್ರಾನೈಟ್‌ಗಾಗಿ ಶ್ರೀ ವೈ. ವೇಣುಗೋಪಾಲ್ ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 533ರ ಗುತ್ತಿಗೆಯನ್ನು ಗುತ್ತಿಗೆ ಮೇಲಿನ ಬಾಕಿ ರೂ.2,02,853/–ಗಳನ್ನು ಪಾವತಿಸದೆ ಇದ್ದ ಕಾರಣ ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಅಂತಿಮ ನೋಟೀಸ್ ಪತ್ರ ಸಂಖ್ಯೆ: ಗಭೂಇ/ಡಿಸಿಬಿ/ಕಗಗು/533/2010–11/13428, ದಿನಾಂಕ:27.12.2010.

2) 2009–10ನೇ ಸಾಲಿನ ಲೆಕ್ಕ ಪರಿಶೀಲನಾ ವರದಿ.

**ಪ್ರಸ್ತಾವನೆ:**

ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು, ಹುಲಗೇರಿ ಗ್ರಾಮದ ಸರ್ವೆ ಸಂಖ್ಯೆ: 123/1/4ರಲ್ಲಿ ಶ್ರೀ ವೈ. ವೇಣುಗೋಪಾಲ್ ರವರಿಗೆ ಪಿಂಕ್ ಗ್ರಾನೈಟ್‌ಗಾಗಿ 2–00 ಎಕರೆಗೆ ದಿನಾಂಕ:25.07.2002 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:533 ಮಂಜೂರು ಮಾಡಲಾಗಿತ್ತು. ಉಲ್ಲೇಖಿತ ಪತ್ರ (1) ರಂತೆ ಗುತ್ತಿಗೆದಾರರಿಗೆ ಅಂತಿಮ ನೋಟೀಸು ಪತ್ರವನ್ನು ನೀಡಿ ಗುತ್ತಿಗೆ ಮೇಲಿನ ಬಾಕಿಯನ್ನು 60 ದಿನಗಳೊಳಗೆ ಸಂದಾಯಿಸುವಂತೆ ತಿಳಿಸಲಾಗಿತ್ತು. ಆದರೆ, 2009–10ನೇ ಸಾಲಿನ ಲೆಕ್ಕ ಪರಿಶೀಲನಾ ವರದಿಯಲ್ಲಿ ವರದಿ ಮಾಡಿರುವಂತೆ ಸಾಲಿನ ಅಂತ್ಯಕ್ಕೆ ರೂ.2,02,853/–ಗಳು ಬಾಕಿ ಇದ್ದು ಗುತ್ತಿಗೆದಾರರು ಬಾಕಿ ಪಾವತಿಸದೆ ಗುತ್ತಿಗೆಯನ್ನು ನಿಷ್ಕ್ರಿಯಗೊಳಿಸಿರುವುದಾಗಿ ವರದಿ ಮಾಡಿರುತ್ತಾರೆ. ಸದರಿ ಗುತ್ತಿಗೆದಾರರಿಂದ ಇದುವರೆವಿಗೂ ಬಾಕಿ ಪಾವತಿಯಾಗಿರುವುದಿಲ್ಲ.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ, ನಿರ್ದೇಶಕರು ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ನೋಟೀಸ್‌ಗೆ ಯಾವ ರೀತಿಯು ಸ್ಪಂದಿಸಿಲ್ಲದ ಕಾರಣ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39ರಡಿ ಸರ್ಕಾರದ ಅಧಿಸೂಚನೆ III ಸಂಖ್ಯೆ ಸಿಐ:418:ಎಂ.ಆರ್.ಸಿ:92, ದಿನಾಂಕ:02.07.1994 ಪ್ರತ್ಯೋಜಿಸಿರುವ ಅಧಿಕಾರದಂತೆ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 533ರ ಗುತ್ತಿಗೆಯನ್ನು ರದ್ದುಪಡಿಸುವ ಕ್ರಮ ಜರುಗಿಸುವುದು ಅವಶ್ಯಕವಾಗಿರುವುದರಿಂದ ಈ ಕೆಳಗಿನಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಗಭೂಇ/ಡಿಸಿಬಿ/ಕಗಗು/533/2010–11/15, ದಿನಾಂಕ: 01.04.2011**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39ರಂತೆ ಗಣಿ ಮತ್ತು ಭೂವಿಜ್ಞಾನ ಇಲಾಖೆಯ, ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು, ಹುಲಗೇರಿ ಗ್ರಾಮದ ಸರ್ವೆ ಸಂಖ್ಯೆ: 123/1/4ರಲ್ಲಿ 2–00 ಎಕರೆಗೆ ಪಿಂಕ್ ಗ್ರಾನೈಟ್‌ಗಾಗಿ ನೀಡಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:533ರ ಗುತ್ತಿಗೆಯನ್ನು ಗುತ್ತಿಗೆ ಮೇಲಿನ ಬಾಕಿ ಪಾವತಿಸದೇ ಇರುವ ಕಾರಣ ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ. ಹಾಗೂ ಈ ಗುತ್ತಿಗೆ ಮಂಜೂರಾತಿ ಸಮಯದಲ್ಲಿ ಸಲ್ಲಿಸಿದ್ದ ಭದ್ರತಾ ಠೇವಣಿಯನ್ನು ಇಲಾಖೆಯು ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ನಿರ್ದೇಶಕರು,

ಪಿ.ಆರ್.414 ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು.

## ತಹಶೀಲ್ದಾರ್‌ರವರ ಕಾರ್ಯಾಲಯ, ಆನೇಕಲ್ ತಾಲ್ಲೂಕು, ಆನೇಕಲ್

**ನಮೂನೆ–27**

**ಪ್ರಕಟಣೆ**

**ನಂ.ಎಲ್.ಎನ್.ಡಿ./ಸಿ.ಆರ್/59/2006–07, ದಿನಾಂಕ:23.03.2011**

1. ಕರ್ನಾಟಕ ರಾಜ್ಯ ಸರ್ಕಾರದ ನಿಯಮಾವಳಿಗಳಂತೆ ಸರ್ಕಾರಿ ಗುಂಡುತೋಪು ಜಮೀನಾಗಿರುತ್ತದೆ. ಅದರಂತೆ ಅರೆನೂರು ಗ್ರಾಮದ ಸ.ನಂ.79ರ ಸರ್ಕಾರಿ ಗುಂಡುತೋಪು ವಿಸ್ತೀರ್ಣ 1–32 (ಎ–ಗುಂ) ಜಮೀನನ್ನು ಸಾರ್ವಜನಿಕ ಉದ್ದೇಶ ಸರ್ಕಾರಿ ಶಾಲೆಗಾಗಿ ಕಾಯ್ದಿರಿಸಲು ಉದ್ದೇಶಿಸಿದ್ದು, ಸದರಿ ಜಮೀನು ಹಾಲಿ ಸಾರ್ವಜನಿಕ ಉಪಯೋಗಕ್ಕೆ ಅವಶ್ಯಕತೆ ಇರುವುದಿಲ್ಲ. ಆದುದರಿಂದ ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 68(1)ರ ರೀತ್ಯಾ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ವಿವರಿಸಿರುವ ಸ.ನಂ.79ರಲ್ಲಿ ಸರ್ಕಾರಿ ಗುಂಡುತೋಪು ಜಮೀನಿನಲ್ಲಿ 1–32 (ಎ–ಗುಂ) ಜಮೀನನ್ನು ಸಾರ್ವಜನಿಕ ಉಪಯೋಗಕ್ಕೆ ಸರ್ಕಾರಿ ಶಾಲೆಗೆ ಕಾಯ್ದಿರಿಸುವ ಉದ್ದೇಶದಿಂದ ಹಾಗೂ ಸಾರ್ವಜನಿಕರ ಉಪಯೋಗಕ್ಕೆ ಬೇಕಿಲ್ಲದಿರುವ ಪ್ರಯುಕ್ತ ಸದರಿ ಜಮೀನಿನ ಮೇಲೆ ಸಾರ್ವಜನಿಕರ ಹಕ್ಕು ವೈಯಕ್ತಿಕ ಹಕ್ಕುಗಳು ನಿರ್ಗಮನಗೊಳ್ಳುತ್ತದೆ.

2. ಆದ ಪ್ರಯುಕ್ತ ಯಾವುದೇ ವ್ಯಕ್ತಿ ಅಂತಹ ಜಮೀನಿನ ಮೇಲೆ ಆಸಕ್ತಿ ಉಳ್ಳವರು ಅಥವಾ ಇತರೆ ಆಸಕ್ತಿ ಉಳ್ಳವರು ಅಂದರೆ ಸರ್ಕಾರಿ ಗುಂಡುತೋಪು ಜಮೀನನ್ನು ಸಾರ್ವಜನಿಕ ಉದ್ದೇಶಕ್ಕೆ ಸರ್ಕಾರಿ ಶಾಲೆಗೆ ವಿಲೇವಾರಿ ಮಾಡಿರುವುದರಿಂದ ತೊಂದರೆಗೊಳಗಾಗಿರುವವರು ಈ ಪ್ರಕಟಣೆಯ ದಿನಾಂಕದಂದು 90 ದಿನಗಳ ಒಳಗಾಗಿ ಲಿಖಿತ ಮೂಲಕ ಆನೇಕಲ್ ತಾಲ್ಲೂಕು ತಹಶೀಲ್ದಾರ್ ರವರಿಗೆ ತಲುಪುವಂತೆ ಕಳಿಸುವುದು ನಿಗದಿತ ವೇಳೆಯನ್ನು ಮೀರಿ ಬರುವಂತಹ ಆಕ್ಷೇಪಣೆಯನ್ನು ಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲಾ ಅಲ್ಲದೆ ನಿಗದಿತ ವೇಳೆಯಲ್ಲಿ ಯಾವುದೇ ಆಕ್ಷೇಪಣೆಗಳು ತಲುಪದಿದ್ದಲ್ಲಿ ಸದರಿ ಸರ್ಕಾರಿ ಗುಂಡುತೋಪು ಜಮೀನಿನ 1–32 (ಎ–ಗುಂ) ಜಮೀನನ್ನು ಸರ್ಕಾರಿ ಶಾಲೆಗೆ ಸಾರ್ವಜನಿಕವಾಗಿ ವಿಲೇವಾರಿ ಮಾಡುವ ಬಗ್ಗೆ ಯಾವುದೇ ಆಕ್ಷೇಪಣೆಗಳು ಇರುವುದಿಲ್ಲವೆಂದು ಪರಿಗಣಿಸಿ ಕಾನೂನು ರೀತ್ಯಾ ಮುಂದಿನ ಕ್ರಮ ಕೈಗೊಳ್ಳಲಾಗುವುದು.

**ಷೆಡ್ಯೂಲ್**

| ಜಿಲ್ಲೆ– ಬೆಂಗಳೂರು | ತಾಲ್ಲೂಕು–ಆನೇಕಲ್ | ಗ್ರಾಮ– ಅರೆನೂರು |
|---|---|---|
| ಸ.ನಂ.79 | ವಿಸ್ತೀರ್ಣ– 1–32 (ಎ–ಗುಂ) | ವರ್ಗೀಕರಣ– ಸರ್ಕಾರಿ ಗುಂಡುತೋಪು |
| ಪೂರ್ವಕ್ಕೆ–ಸ.ನಂ.80 | | ಪಶ್ಚಿಮಕ್ಕೆ–ಸರ್ಕಾರಿ ಗೋಮಾಳ ಜಮೀನು |
| ಉತ್ತರಕ್ಕೆ–ಸ.ನಂ.94,70 | | ದಕ್ಷಿಣಕ್ಕೆ–ಒಣಿ, ಸ.ನಂ.93 |

ತಹಶೀಲ್ದಾರ್,

ಪಿ.ಆರ್.477 ಆನೇಕಲ್ ತಾಲ್ಲೂಕು, ಆನೇಕಲ್.

**ಉಪ ಆಯುಕ್ತರು (ಭೂಸ್ವಾಧೀನ), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ರವರ ಕಾರ್ಯಾಲಯ, ಬೆಂಗಳೂರು.**

**ಭೂ ಅರ್ಜನೆ ಅಧಿನಿಯಮದ 4(1)ನೇ ಪ್ರಕರಣದ ಮೇರೆಗೆ ಅಧಿಸೂಚನೆ**

**ಕ್ರಮಾಂಕ: ಎಲ್‌ಎಕ್ಯೂ /ಪಿಆರ್/35/2010–2011, ದಿನಾಂಕ: 21 ನೇ ಜುಲೈ 2011**

**ಇದರ ಅನುಸೂಚಿಯಲ್ಲಿ ನಿರ್ದಿಷ್ಟ ಪಡಿಸಿದ ಆಸ್ತಿಗಳು, ಸಾರ್ವಜನಿಕ ಉದ್ದೇಶಗಳಿಗಾಗಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವಾರ್ಡ್ ಸಂಖ್ಯೆ: 187 ರ ಸಾರಕ್ಕಿ ಕೆರೆಯಿಂದ ಪುಟ್ಟೇನಹಳ್ಳಿ, ಬಿಳೇಕಹಳ್ಳಿ ಮಡಿವಾಳ ಕೆರೆ ಮಾರ್ಗವಾಗಿ ಕಣಿವೆ ಸಂಖ್ಯೆ: ಕೆ–209ರ ಬೃಹತ್ ಮಳೆ ನೀರುಗಾಲುವೆಯನ್ನು ಕೋರಮಂಗಲದವರೆಗೆ ಪುನರುಜ್ಜೀವನಗೊಳಿಸುವ ಕಾಮಗಾರಿಗಾಗಿ ಸಾರಕ್ಕಿ ಕೆರೆ ಗ್ರಾಮದ ಸರ್ವೆ ನಂ.4/1, 24/3, 24/4, 24/1ಎ, 24/1ಡಿ, 24/1ಇ ಗಳಲ್ಲಿನ ಖಾಸಗಿ ಸ್ವತ್ತುಗಳನ್ನು ಭೂಸ್ವಾಧೀನಪಡಿಸಿಕೊಳ್ಳುವುದು ಅವಶ್ಯಕವಾಗಿದೆ ಎಂದು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಕಂಡುಬಂದಿರುವುದರಿಂದ:**

1976ರ ಕರ್ನಾಟಕ ಮುನಿಸಿಪಲ್ ಕಾರ್ಪೊರೇಷನ್ಸ್ ಕಾಯ್ದೆಯ ಕಲಂ 177 ಮತ್ತು ಕರ್ನಾಟಕ ಅಧಿನಿಯಮ ಸಂಖ್ಯೆ: 33ರ ಮೂಲಕ ತಿದ್ದುಪಡಿಯಾದ 1991ನೇ ಸಾಲಿನ ಭೂ ಸ್ವಾಧೀನ ಅಧಿನಿಯಮ 1894ರ (ಕೇಂದ್ರ ಅಧಿನಿಯಮ, ಸಂಖ್ಯೆ:1894ರ 1) 4ನೇ ಪ್ರಕರಣದ–(1)ನೇ ಉಪ ಪ್ರಕರಣದ ಉಪಬಂದಗಳ ಅನುಸಾರವಾಗಿ, ಅದಕ್ಕೆ ಸಂಬಂಧಪಟ್ಟ ಎಲ್ಲರಿಗೂ ಈ ಬಗ್ಗೆ ಈ ಮೂಲಕ ನೋಟೀಸನ್ನು ಕೊಡಲಾಗಿದೆ ಹಾಗೂ ಕರ್ನಾಟಕ ಸರ್ಕಾರವು ಆ ಅಧಿನಿಯಮದ 4(2)ನೇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಲು ವಿಶೇಷ ಭೂಸ್ವಾಧೀನಾಧಿಕಾರಿಗಳು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು– ಭೂ ಅರ್ಜನೆ ಅಧಿಕಾರಿ, ಅವರ ಸಿಬ್ಬಂದಿ ಹಾಗೂ ಕೆಲಸಗಾರರಿಗೆ ಈ ಮೂಲಕ ಅಧಿಕಾರ ನೀಡಲಾಗಿದೆ.

ಸದರಿ ಅಧಿನಿಯಮದ 3(ಸಿ) ಪ್ರಕರಣದ ಮೇರೆಗೆ ಕರ್ನಾಟಕ ಸರ್ಕಾರವು ಅಧಿನಿಯಮದ 5(ಎ) ಪ್ರಕರಣದ ಮೇರೆಗೆ ಉಪ ಆಯುಕ್ತರು (ಭೂಸ್ವಾಧೀನ) ರವರ ಪ್ರಕಾರ್ಯಗಳನ್ನು ನಿರ್ವಹಿಸಲು ವಿಶೇಷ ಭೂಸ್ವಾಧೀನಾಧಿಕಾರಿಗಳು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು, ಇವರನ್ನು ನೇಮಕ ಮಾಡಿದೆ.

ಭೂಮಿಯಲ್ಲಿ/ಆಸ್ತಿಯಲ್ಲಿ ಹಿತಾಸಕ್ತಿ ಹೊಂದಿರುವ ಯಾವನೇ ವ್ಯಕ್ತಿಯು ತನ್ನ ಆಕ್ಷೇಪಣೆಗಳು ಯಾವುದಾದರೂ ಇದ್ದರೆ ಅವುಗಳನ್ನು ಅಧಿಸೂಚನೆಯು ಪ್ರಕಟವಾದ ತಾರೀಖಿನಿಂದ ಮೂವತ್ತು ದಿನಗಳ ಒಳಗಾಗಿ ಅಥವಾ ಅದಕ್ಕಿಂತ ಮುಂಚೆ ಕರ್ನಾಟಕ ಅಧಿನಿಯಮ 1961ರ 17ರ ಮೂಲಕ ತಿದ್ದುಪಡಿಯಾದ ಭೂ ಅರ್ಜನೆ ಅಧಿನಿಯಮ 1894ರ 3(ಸಿ) ಪ್ರಕರಣದ ಮೇರೆಗೆ ಉಪ ಆಯುಕ್ತರು(ಭೂಸ್ವಾಧೀನ) ರವರ ಪ್ರಕಾರ್ಯಗಳನ್ನು ನಿರ್ವಹಿಸಲು ನೇಮಕವಾದ ವಿಶೇಷ ಭೂಸ್ವಾಧೀನಾಧಿಕಾರಿಗಳು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು, ಇವರಿಗೆ ಲಿಖಿತ ಮೂಲಕ ಸಲ್ಲಿಸತಕ್ಕದ್ದು.

ಸದರಿ ಅರ್ಜನೆ ಉದ್ದೇಶಕ್ಕಾಗಿ ಸದರಿ ಭೂಮಿಗಳ/ಆಸ್ತಿಗಳ ಮೇಲೆ ನಿಯೋಜಿತರಾದ ಯಾವುದೇ ಮೋಜಣಿದಾರರು ಅಥವಾ ಇತರೇ ವ್ಯಕ್ತಿಗಳಿಗೆ ಅಡ್ಡಿಯನ್ನುಂಟು ಮಾಡಬಾರದೆಂದು ಅಥವಾ ಅವರ ಕಾರ್ಯದಲ್ಲಿ ಹಸ್ತಕ್ಷೇಪ ಮಾಡಬಾರದೆಂದು ಸದರಿ ಭೂಮಿ/ಆಸ್ತಿಗಳಲ್ಲಿ ಹಿತಾಸಕ್ತಿ ಹೊಂದಿರುವ ಎಲ್ಲಾ ವ್ಯಕ್ತಿಗಳಿಗೆ ಈ ಮೂಲಕ ಎಚ್ಚರಿಕೆ ನೀಡಲಾಗಿದೆ. ಈ ಅಧಿಸೂಚನೆಯು ಪ್ರಕಟವಾದ ದಿನಾಂಕದ ನಂತರ ಉಪ ಆಯುಕ್ತರು (ಭೂಸ್ವಾಧೀನ), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು,ರವರ ಅನುಮತಿಯಿಲ್ಲದೆ ಮಾರಾಟ, ಗುತ್ತಿಗೆ, ಅಡಮಾನ, ವಿನಿಮಯದ ಮೂಲಕ ಅಥವಾ ಬೇರೆ ರೀತಿಯ ಮೂಲಕ ಸದರಿ ಭೂಮಿಗಳ/ಆಸ್ತಿಗಳ ವಿಲೇಗಾಗಿ ಮಾಡಿಕೊಂಡ ಯಾವುದೇ ಕರಾರುಗಳನ್ನು ಅಥವಾ ಅದರಲ್ಲಿ ಮಾಡಲಾದ ವೆಚ್ಚ ಅಥವಾ ಅಭಿವೃದ್ಧಿಗಳನ್ನು ಅಂತಿಮವಾಗಿ ಅರ್ಜನೆ ಮಾಡಿಕೊಳ್ಳಲಾಗುವ ಸದರಿ ಭೂಮಿ/ಆಸ್ತಿಗಳ ಅಂತಹ ಭಾಗಗಳಿಗೆ ಪರಿಹಾರಕ್ಕಾಗಿ ನಿರ್ಧರಣೆ ಮಾಡುವ ಅಧಿಕಾರಿಯು ಸದರಿ ಅಧಿನಿಯಮದ(ಏಳನೇ ಖಂಡ) 2ನೇ ಪ್ರಕರಣದ ಮೇರೆಗೆ ಗಣನೆಗೆ ತೆಗೆದುಕೊಳ್ಳಬಾರದು. ವಿಶೇಷ ಭೂಸ್ವಾಧೀನಾಧಿಕಾರಿ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಕೇಂದ್ರ ಕಛೇರಿ, ನರಸಿಂಹರಾಜು ವೃತ್ತ, ಬೆಂಗಳೂರು. ಇವರ ಕಛೇರಿಯಲ್ಲಿ ಭೂಮಿಗಳ/ಆಸ್ತಿಗಳ ಸ್ಥೂಲ ನಕಾಶೆಯನ್ನು ಪರಿಶೀಲನೆಗಾಗಿ ಇಡಲಾಗಿದೆ.

**ಅನುಸೂಚಿ**

**ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವಾರ್ಡ್ ಸಂಖ್ಯೆ: 187 ರ ಸಾರಕ್ಕಿ ಕೆರೆಯಿಂದ ಪುಟ್ಟೇನಹಳ್ಳಿ, ಬಿಳೇಕಹಳ್ಳಿ ಮಡಿವಾಳ ಕೆರೆ ಮಾರ್ಗವಾಗಿ ಕಣಿವೆ ಸಂಖ್ಯೆ: ಕೆ–209ರ ಬೃಹತ್ ಮಳೆ ನೀರುಗಾಲುವೆಯನ್ನು ಕೋರಮಂಗಲದವರೆಗೆ ಪುನರುಜ್ಜೀವನಗೊಳಿಸುವ ಕಾಮಗಾರಿಗಾಗಿ ಸಾರಕ್ಕಿ ಕೆರೆ ಗ್ರಾಮದ ಸರ್ವೆ ನಂ.4/1, 24/3, 24/4, 24/1ಎ, 24/1ಡಿ, 24/1ಇ ಗಳಲ್ಲಿನ ಖಾಸಗಿ ಸ್ವತ್ತುಗಳನ್ನು ಭೂಸ್ವಾಧೀನಪಡಿಸಿಕೊಳ್ಳುತ್ತಿದ್ದು, ಸ್ವತ್ತುಗಳ ವಿವರ ಈ ಕೆಳಕಂಡಂತೆ ಇವೆ.**

| ಕ್ರ. ಸಂ. | ಭೂಸ್ವಾಧೀನಕ್ಕೆ ಒಳಪಟ್ಟ ಆಸ್ತಿಯ/ಸ್ವತ್ತಿನ ಮಾಲೀಕರ/ಅನುಭವದಾರರ ಹೆಸರು | ಗ್ರಾಮದ ಹೆಸರು | ಸರ್ವೆ ನಂ. | ಆಸ್ತಿ ಸಂಖ್ಯೆ | ಖಾತಾ ಸಂಖ್ಯೆ | ಸ್ವತ್ತಿನ ತರಹ (ನಿವೇಶನ+ ಕಟ್ಟಡ ಇತ್ಯಾದಿ) | ಭೂಸ್ವಾಧೀನತೆಗೆ ಒಳಪಟ್ಟಿರುವ ವಿಸ್ತೀರ್ಣ | | ಚಕ್ಕುಬಂದಿ | | | |
|---|---|---|---|---|---|---|---|---|---|---|---|---|
| | | | | | | | (ಚ.ಅಡಿ) | (ಚ.ಮೀ.) | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | ಶ್ರೀ. ವಿ.ಶ್ರೀನಿವಾಸ್ ರೆಡ್ಡಿ ಬಿನ್ ಎಸ್.ಎ.ವೆಂಕಟಸ್ವಾಮಿ ರೆಡ್ಡಿ | ಸಾರಕ್ಕಿ ಕೆರೆ | 24/1ಎ | – | – | ನಿವೇಶನ | 990 | 91.97 | ಖಾಸಗಿ ಆಸ್ತಿ | ರಸ್ತೆ | ಖಾಸಗಿ ಆಸ್ತಿ | ಉಳಿಕೆ |

| ಕ್ರ. ಸಂ. | ಭೂಸ್ವಾಧೀನಕ್ಕೆ ಒಳಪಟ್ಟ ಆಸ್ತಿಯ/ಸ್ವತ್ತಿನ ಮಾಲೀಕರ/ಅನುಭವದಾರರ ಹೆಸರು | ಗ್ರಾಮದ ಹೆಸರು | ಸರ್ವೆ ನಂ. | ಆಸ್ತಿ ಸಂಖ್ಯೆ | ಖಾತಾ ಸಂಖ್ಯೆ | ಸ್ವತ್ತಿನ ತರಹ (ನಿವೇಶನ+ ಕಟ್ಟಡ ಇತ್ಯಾದಿ) | ಭೂಸ್ವಾಧೀನತೆಗೆ ಒಳಪಟ್ಟಿರುವ ವಿಸ್ತೀರ್ಣ | | ಚಕ್ಕುಬಂದಿ | | | |
|---|---|---|---|---|---|---|---|---|---|---|---|---|
| | | | | | | | (ಚ.ಅಡಿ) | (ಚ.ಮೀ.) | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 2 | ಶ್ರೀಮತಿ. ಎನ್.ಲಕ್ಷ್ಮೀ ಕೋಂ ರಾಮು | ಸಾರಕ್ಕಿ ಕೆರೆ | 24/1ಎ | 1ನೇ ನಂ.ಸೈಟ್ | – | ನಿವೇಶನ | 1200 | 111.48 | ರಸ್ತೆ | ಖಾಸಗಿ ಆಸ್ತಿ | ಖಾಸಗಿ ಆಸ್ತಿ | ಖಾಲಿ ನಿವೇಶನ |
| 3 | ಶ್ರೀ. ವೇಣುಗೋಪಾಲ ರೆಡ್ಡಿ ಎಸ್.ವಿ. ಬಿನ್ ಎಸ್.ವಿ.ವೆಂಕಟಸ್ವಾಮಿ ರೆಡ್ಡಿ | ಸಾರಕ್ಕಿ ಕೆರೆ | 24/1ಡಿ | 24/1/6/7/ 8/9 | – | ನಿವೇಶನ | 2220 | 206.23 | ಗೋವಿಂದ ರೆಡ್ಡಿ | ರಸ್ತೆ | ವೆಂಕಟೇಶ್ ರೆಡ್ಡಿ | ಖಾಸಗಿ ಆಸ್ತಿ |
| 4 | ಶ್ರೀ.ಟಿ.ಗೋವಿಂದ ರೆಡ್ಡಿ ಬಿನ್ ಲೇಟ್ ಮುನಿರೆಡ್ಡಿ @ ತಾಯಪ್ಪ | ಸಾರಕ್ಕಿ ಕೆರೆ | 24/1ಇ | – | – | ನಿವೇಶನ | 2130 | 197.87 | ವೆಂಕಟೇಶ್ ರೆಡ್ಡಿ | ಖಾಸಗಿ ಆಸ್ತಿ | ಉಳಿಕೆ | ಗೋವಿಂದ ರೆಡ್ಡಿ |
| 5 | ಶ್ರೀ.ಆರ್.ಶ್ರೀರಾಮನ್ ಬಿನ್ ರಾಮಕೃಷ್ಣನಾಯ್ಡು ಶ್ರೀಮತಿ.ಜಿ.ಮಹೇಶ್ವರಿ ಕೋಂ ಗೋವಿಂದರಾಜು | ಸಾರಕ್ಕಿ ಕೆರೆ | 24/4 | ನಿ.ನಂ. 2 ಮತ್ತು 3 | 24/4 | ನಿವೇಶನ | 1050 | 97.545 | ಖಾಸಗಿ ಆಸ್ತಿ | ರಸ್ತೆ | ಖಾಸಗಿ ಆಸ್ತಿ | ಖಾಸಗಿ ಆಸ್ತಿ |
| 6 | ಶ್ರೀ.ಭೈರಪ್ಪ ಬಿನ್ ಲೇಟ್ ಭೈರಪ್ಪ | ಸಾರಕ್ಕಿ ಕೆರೆ | 24/1ಇ | ನಿ.ನಂ.12 | 24/2 | ನಿವೇಶನ | 300 | 27.87 | ರಸ್ತೆ | ಖಾಸಗಿ ಆಸ್ತಿ | ಕಾಲುವೆ | ಖಾಸಗಿ ಆಸ್ತಿ |
| 7 | ಶ್ರೀ.ಜಿ.ಲೋಕನಾಥನ್ ಬಿನ್ ಎಂ.ಗಣೇಶ್ | ಸಾರಕ್ಕಿ ಕೆರೆ | 24/3 | 24/3/66 | 66/66 | ನಿವೇಶನ + ಆರ್.ಸಿ.ಸಿ. ಕಟ್ಟಡ | 720 | 66.89 | ರಸ್ತೆ | ಖಾಸಗಿ ಆಸ್ತಿ | ಉಳಿಕೆ | ಉಳಿಕೆ |
| 8 | ಶ್ರೀಮತಿ. ಹೆಚ್.ರೆಡ್ಡಮ್ಮ ಕೋಂ. ಹೆಚ್.ಬಿ.ರೆಡ್ಡಪ್ಪ | ಸಾರಕ್ಕಿ ಕೆರೆ | – | 6/6/14/1/1 ನಿ.ನಂ.1 | 189 | ನಿವೇಶನ | 108 | 10.03 | ರಸ್ತೆ | ಖಾಸಗಿ ಆಸ್ತಿ | ರಸ್ತೆ | ಖಾಸಗಿ ಆಸ್ತಿ |
| 9 | ಶ್ರೀ.ಪಿ.ಶ್ರೀ ರಾಮಯ್ಯ ಬಿನ್ ಪಿ.ಲಕ್ಷ್ಮೀ ನಾರಾಯಣಯ್ಯ | ಸಾರಕ್ಕಿ ಕೆರೆ | ರಿ.ಸ. ನಂ. 12/2 | 37 | 12/2 | ನಿವೇಶನ + ಆರ್.ಸಿ.ಸಿ. ಕಟ್ಟಡ | 240 | 22.29 | ಖಾಸಗಿ ಆಸ್ತಿ | ಖಾಸಗಿ ಆಸ್ತಿ | ರಸ್ತೆ | ಉಳಿಕೆ ವಾಸದ ಮನೆ |

| ಕ್ರ. ಸಂ. | ಭೂಸ್ವಾಧೀನಕ್ಕೆ ಒಳಪಟ್ಟ ಆಸ್ತಿಯ/ಸ್ವತ್ತಿನ ಮಾಲೀಕರ/ಅನುಭವದಾರರ ಹೆಸರು | ಗ್ರಾಮದ ಹೆಸರು | ಸರ್ವೆ ನಂ. | ಆಸ್ತಿ ಸಂಖ್ಯೆ | ಖಾತಾ ಸಂಖ್ಯೆ | ಸ್ವತ್ತಿನ ತರಹ (ನಿವೇಶನ+ ಕಟ್ಟಡ ಇತ್ಯಾದಿ) | ಭೂಸ್ವಾಧೀನತೆಗೆ ಒಳಪಟ್ಟಿರುವ ವಿಸ್ತೀರ್ಣ | | ಚಕ್ಕುಬಂದಿ | | | |
|---|---|---|---|---|---|---|---|---|---|---|---|---|
| | | | | | | | (ಚ.ಅಡಿ) | (ಚ.ಮೀ.) | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 10 | ಶ್ರೀ.ಮೊಹಮ್ಮದ್ ಶಫಿ ಬಿನ್ ಅಬ್ದುಲ್ ಬಷೀರ್ | ಸಾರಕ್ಕಿ ಕೆರೆ | 24/1 | 39 | 12/2 | ನಿವೇಶನ + ಆರ್.ಸಿ.ಸಿ. ಕಟ್ಟಡ | 504 | 46.82 | ಖಾಸಗಿ ಆಸ್ತಿ | ರಸ್ತೆ | ರಸ್ತೆ | ಖಾಸಗಿ ಆಸ್ತಿ |
| 11 | ಶ್ರೀ.ಹೆಚ್.ಆರ್.ಪ್ರಕಾಶ್ ಬಿನ್ ರಾಜಪ್ಪ | ಸಾರಕ್ಕಿ ಕೆರೆ | 24/1ಎ | 1 | 10/3 | ನಿವೇಶನ + ಆರ್.ಸಿ.ಸಿ. ಕಟ್ಟಡ | 352 | 32.70 | ಖಾಸಗಿ ಆಸ್ತಿ | ರಸ್ತೆ | ರಸ್ತೆ | ಉಳಿಕೆ |
| 12 | ಶ್ರೀ.ಶೇಕ್ ಸಿರಾಜುದ್ದೀನ್ ಬಿನ್ ಶೇಕ್ ಅಬ್ದುಲ್ ಖಾದರ್ | ಸಾರಕ್ಕಿ ಕೆರೆ | – | ನಿ.ನಂ–9 | 189/24 /1–9 | ನಿವೇಶನ | 1100 | 102.19 | ರಸ್ತೆ | ಖಾಸಗಿ ಆಸ್ತಿ | ಖಾಸಗಿ ಆಸ್ತಿ | ಖಾಸಗಿ ಆಸ್ತಿ |
| 13 | ಶ್ರೀ. ಮಹಮದ್ ಅಕ್ಬರ್ ಬಿನ್ ಹಾಜಿ ಅಬ್ದುಲ್ ವಹಾಬ್ | ಸಾರಕ್ಕಿ ಕೆರೆ | – | 1 | 10/2 | ನಿವೇಶನ | 483 | 44.87 | ರಸ್ತೆ | ಉಳಿಕೆ | ರಸ್ತೆ | ಉಳಿಕೆ |
| 14 | ಶ್ರೀ. ಮಹಮದ್ ಅಕ್ಬರ್ ಬಿನ್ ಹಾಜಿ ಅಬ್ದುಲ್ ವಹಾಬ್ | ಸಾರಕ್ಕಿ ಕೆರೆ | 24/1ಎ | ನಿ.ನಂ.1ಎ | 7 ಮತ್ತು 9 | ನಿವೇಶನ | 420 | 39.01 | ರಸ್ತೆ | ಖಾಸಗಿ ಆಸ್ತಿ | ರಸ್ತೆ | ಉಳಿಕೆ |
| 15 | ಶ್ರೀ. ಕೆ.ಚಂದ್ರಶೇಖರ್ ಬಿನ್ ಲೇಟ್ ಸುಬ್ರಮಣಿ ನಾಯ್ಡು | ಸಾರಕ್ಕಿ ಕೆರೆ | 24/1 | ನಿ.ನಂ.9 | 24/1 | ನಿವೇಶನ | 440 | 40.87 | ಖಾಸಗಿ ಆಸ್ತಿ | ರಸ್ತೆ | ಉಳಿಕೆ | ಖಾಸಗಿ ಆಸ್ತಿ |
| 16 | ಶ್ರೀ. ಎಮ್.ಗೋವಿಂದ ರಾಜು ಬಿನ್ ಲೇಟ್ ಎಮ್.ವಿ.ರಾಜು | ಸಾರಕ್ಕಿ ಕೆರೆ | 4/1 | 4/1/ಎ1 | 4/1/ಎ1 | ನಿವೇಶನ+ ಆರ್.ಸಿ.ಸಿ. ಕಟ್ಟಡ | 3682'8' (–)1089 2594 | 240.98 | ಸ.ನಂ–4/2 | ಸ.ನಂ.7 | ಉಳಿಕೆ | ಉಳಿಕೆ |
| 17 | ಶ್ರೀ. ಶಶಿಕಲಾ ಕೋಂ. ಅಂಗಡಿ ನಾಗರಾಜು | ಸಾರಕ್ಕಿ ಕೆರೆ | 24/1 | 4 | 24/1/ 24/2 | ನಿವೇಶನ | 63 | 5.85 | ರಸ್ತೆ | ಖಾಸಗಿ ಆಸ್ತಿ | 5 ಅಡಿ ಪ್ಯಾಸೇಜ್ | ಖಾಸಗಿ ಆಸ್ತಿ |
| | | | | | | ಒಟ್ಟು | **14914** | **1385.465** | | | | |

ಬೆಂಗಳೂರು
ದಿನಾಂಕ: 21–07–2011
ಪಿಡಿ–111

ಉಪ ಆಯುಕ್ತರು (ಭೂಸ್ವಾಧೀನ)
ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ.